# ವಿಶಿಷ್ಟಾದ್ವೈತದ ಪಂಚಾಚಾರ್ಯರು

(ಐವರು ಪ್ರಮುಖ ಶ್ರೀವೈಷ್ಣವ ಆಚಾರ್ಯರ ವ್ಯಕ್ತಿಚರಿತ್ರೆ)


ಲೇಖಕರು ಮತ್ತು ಪ್ರಕಾಶಕರು

**ಹೆಚ್. ಜಿ. ರಾಮಯ್ಯಂಗಾರ್**

೧೧೬/೫ಎ, ಶ್ರೀಲಕ್ಷ್ಮೀ ವೆಂಕಟೇಶ ಸದನ

ಬಸವಣ್ಣನಗುಡಿಬೀದಿ ಅಡ್ಡರಸ್ತೆ

ಬೆಂಗಳೂರು – ೫೬೦ ೦೧೯



೧೯೮೪ ಬೆಲೆ ರೂ. ೬

VISISTADVAITADA PANCHACHARYARU—A book on the biography of five great Srivaishnava Acharyas. Written and Published by Shree H. J. Ramaiengar, Retired Subject Inspector, 117/5A, Shree Lakshmivenkatesha Sadana, Bull Temple Road Cross, Bangalore-560019.

First Published : 1984. Pages : 4+

1000 Copies Price : Rs.

THIS BOOK IS PUBLISHED
WITH THE FINANCIAL ASSISTANCE OF
TIRUMALA TIRUPATHI DEVASTHANAMS
UNDER THEIR SCHEME
AID TO RELIGIOUS BOOKS

Printers :

**AnandaniJaya Printers**

No. 2, Vinayaka Extension, Gavipuram Road
Kempegowda Nagar, BANGALORE-560019

# ಅ ರ್ಪ ಣೆ



ಬೆಂಗಳೂರು ನಗರದ

ಜನಪ್ರಿಯ ವಿ. ಬಿ. ಬೇಕರಿಯ ಮಾಲೀಕರೂ,

ಕೆಲಸಗಾರರ ಮಿತ್ರರೂ, ಸುಪ್ರಸಿದ್ಧದಾನಿಗಳೂ,

ಹಮ್ಮು-ಬಿಮ್ಮುಗಳನ್ನರಿಯದ ಸಜ್ಜನರೂ,

ಬಂಧು-ಬಳಗದವರ ಹಿತಚಿಂತಕರೂ

ಶ್ರೀ ಶ್ರೀ ವೈಷ್ಣವ ಸೇವಾ ಸಭೆಯ

ಪ್ರಥಮ ಅಧ್ಯಕ್ಷರೂ

ಆಗಿದ್ದ

ಕೆ. ಜೆ. ತಿರುಮಲಾಚಾರ್ಯರ

ಚಿ ರ ಸ್ಮ ರ ಣೆ ಗಾ ಗಿ

# ಅರಿಕೆ

ವ್ಯಾಘ್ರಶೈಲಾಗ್ರಮಂದಾರಂ ಭಕ್ತಾಭೀಷ್ಟಪ್ರದಾಯಿನಂ ।
ವಂದೇಹಮಿಂದಿರಾನಾಥಂ ಪ್ರಸನ್ನಂ ವೇಂಕಟೇಶ್ವರಂ ॥

ವಿಶಿಷ್ಟಾದ್ವೈತ ವೇದಾಂತ ಹಾಗೂ ಶ್ರೀವೈಷ್ಣವ ಧರ್ಮವನ್ನು ರೂಪಿಸಿ ಬೆಳೆಸಿದ ಐವರು ಪ್ರಮುಖ ಆಚಾರ್ಯರ ಬದುಕು, ಬರಹ, ಬೋಧನೆಗಳ ಒಂದು ಪುಟ್ಟ ಪರಿಚಯವನ್ನು ಈ ಪುಸ್ತಕದಲ್ಲಿ ಮಾಡಿ ಕೊಡಲು ಯತ್ನಿಸಲಾಗಿದೆ. ಶ್ರೀ ವೈಷ್ಣವ ಸಮಾಜದ ರಕ್ಷಣೆ, ವಿಕಾಸ ಮತ್ತು ಸಮನ್ವಯಗಳಿಗೆ ಇದರಿಂದ ಸ್ಫೂರ್ತಿ, ಸಹಾಯಗಳು ಸಿಕ್ಕಿದರೆ ಲೇಖಕನ ಶ್ರಮ ಸಾರ್ಥಕವಾದಂತೆ.

ಈ ಬಗ್ಗೆ ಹೆಚ್ಚಿನ ವಿಷಯವನ್ನು ತಿಳಿಯಲಿಚ್ಛಿಸುವವರು, ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರು, ವಿದ್ವಾಂಸರು ಮತ್ತು ಪತ್ರಿಕೆಗಳಿಂದ ಪ್ರಶಂಸಿಸಲ್ಪಟ್ಟ, 1982ರ ಮಾನವಿಕ ವಿಭಾಗದ ಅತ್ಯುತ್ತಮ ಗ್ರಂಥವೆಂದು ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಬಹುಮಾನಿಸಲ್ಪಟ್ಟ, "ಶ್ರೀ ರಾಮಾನುಜ ಸಿದ್ಧಾಂತ ದರ್ಪಣ"ವನ್ನು ಓದಬಹುದು.

ವೈದಿಕ ವಿದ್ಯೆಯನ್ನು ಕಲಿತು, ಧರ್ಮಾನುಷ್ಠಾನದಲ್ಲಿ ಶ್ರದ್ಧಾ ಭಕ್ತಿಗಳು ಉಂಟಾಗಲು ಕಾರಣರಾದವರು ನನ್ನ ತಾಯಿ ಸೀತಮ್ಮ ಮತ್ತು ನನ್ನ ತಂದೆ ಹೆಚ್. ಆರ್. ಜನಾರ್ದನಯ್ಯಂಗಾರ್; ಧರ್ಮಮಾರ್ಗದಲ್ಲೇ ನಡೆದು, ಅರ್ಥ–ಕಾಮಗಳನ್ನು ಪೂರೈಸಿಕೊಳ್ಳಲು ಪ್ರೇರೇಪಣೆ ಇತ್ತವರು ಶ್ರೀಮತಿ ತಂಗಮ್ಮ ಮತ್ತು ಶ್ರೀಮಾನ್ ಡಾ॥ ಎಸ್. ಟಿ ಪಾರ್ಥಸಾರಥಿ ದಂಪತಿಗಳು; ಸನಾತನ ಧರ್ಮದ

ಬಗ್ಗೆ ವ್ಯವಸ್ಥಿತ ಶಿಕ್ಷಣ ದೊರಕಿದುದು ತಿರುಪತಿಯ ಶ್ರೀವೇಂಕಟೇಶ್ವರ ಪ್ರಾಚ್ಯ ಸಂಶೋಧನ ಸಂಸ್ಥೆಯಿಂದ; ಈ ಗ್ರಂಥದ ಪ್ರಕಟಣೆಗೆ ಹೆಚ್ಚು ಧನ ಸಹಾಯ ಕೊಡಿಸಿದವರು ತಿರುಮಲ ತಿರುಪತಿ ದೇವಸ್ಥಾನದ ಆಡಳಿತಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಹಾಗೂ ಸಂಪಾದಕ ಶ್ರೀ ಕೆ. ಸುಬ್ಬರಾವ್; ಇದರ ಪ್ರಕಟಣೆಗೂ ಸ್ವಲ್ಪ ಧನ ಸಹಾಯ ಮಾಡಿದವರು ವಿ.ಬಿ. ಬೇಕರಿಯ ಮಾಲೀಕರಾದ ಶ್ರೀ ಕೆ.ಟಿ. ಶ್ರೀನಿವಾಸ್; ಇದನ್ನು ಅತ್ಯಲ್ಪ ಕಾಲದಲ್ಲಿ ಅಂದವಾಗಿ ಮುದ್ರಿಸಿ ಕೊಟ್ಟವರು ಆನಂದನಿಲಯ ಮುದ್ರಣಾಲಯದ ಮಾಲೀಕರಾದ ಶ್ರೀ ಕೆ. ಎಸ್. ಆನಂದ್ ಮತ್ತು ಅಲ್ಲಿನ ಕೆಲಸಗಾರರು—ಈ ಎಲ್ಲ ವ್ಯಕ್ತಿ, ಸಂಸ್ಥೆಗಳಿಗೂ ನಾನು ಋಣಿಯಾಗಿದ್ದೇನೆ.

ಬೆಂಗಳೂರು–೧೯ — ಸೇವಾಕಾಂಕ್ಷಿ

ದಿನಾಂಕ: ೬–೨–೧೯೮೪ — ಹು. ಜ. ರಾಮಯ್ಯಂಗಾರ್

## ವಿಷಯ ಸೂಚಿಕೆ

# ವಿಶಿಷ್ಟಾದ್ವೈತದ ಪಂಚಾಚಾರ್ಯರು

## ಅಧ್ಯಾಯ ೧= ಆಚಾರ್ಯಾಭಿಮಾನ

ಆಚಾರ್ಯರಲ್ಲಿ ಅಭಿಮಾನ ಅಥವಾ ನಿಷ್ಠೆಯನ್ನು ಹೊಂದಿರುವುದೇ, ಸಿದ್ಧಾಂತ ಮತ್ತು ನಂಬಿಕೆಗಳ ಸಂಮಿಲನವಾದ ವಿಶಿಷ್ಟಾದ್ವೈತ ವೇದಾಂತದ ಒಂದು ವೈಶಿಷ್ಟ್ಯ. ಆಧ್ಯಾತ್ಮಿಕ ಪರಿಪೂರ್ಣತೆ ಮತ್ತು ಪರಮಾತ್ಮನ ಅರಿವು ಪಡೆಯಬೇಕೆನ್ನುವ ವ್ಯಕ್ತಿಯ ಯತ್ನದಲ್ಲಿ ಮಂತ್ರ ಮತ್ತು ಅದರ ಅರ್ಥವನ್ನು ಉಪದೇಶ ಮಾಡಿ, ಚೇತನರನ್ನು ಮುಕ್ತಿ ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವ ಕಾರ್ಯದಲ್ಲಿ, ಗುರು ಅಥವಾ ಆಚಾರ್ಯನ ಪಾತ್ರವು ಅತ್ಯಂತ ಮಹತ್ವವುಳ್ಳದ್ದು ಆಗಿರುತ್ತದೆ. ಆಚಾರ್ಯ ನಿಷ್ಠೆ ಇಲ್ಲದವರಿಗೆ ಮೋಕ್ಷವಿಲ್ಲ ಎಂಬುದು ಕೆಲವರ ಅಭಿಪ್ರಾಯ.

ಕಮಲದ ಹೂವಿಗೆ ನೀರು ಇದ್ದಂತೆ, ಜೀವಿಗಳಿಗೆ ಗುರುವಿನ ಸಂಬಂಧ ಇರುತ್ತದೆ. ನೀರಿನಲ್ಲಿರುವ ಕಮಲವನ್ನು ಸೂರ್ಯನೇ ಅರಳುವಂತೆ ಮಾಡಿದರೂ, ನೀರಿನಿಂದ ಹೊರಬಂದ ಕಮಲವನ್ನು ಅದೇ ಸೂರ್ಯನು ಒಣಗಿಸಿ ಬಿಡುತ್ತಾನೆ. ಆದಕಾರಣ ಪ್ರಾರಬ್ಧವೆಂಬ ಕರ್ಮಕೂಪದಲ್ಲಿ ಮುಳುಗಿರುವ

ಜೀವಿಯನ್ನು ಮೇಲಕ್ಕೆ ಎತ್ತುವ ಮಾಧ್ಯಮನೇ ಆಚಾರ್ಯನಾಗಿರುತ್ತಾನೆ. ಅಜ್ಞಾನೋ ಅಲ್ಪಜ್ಞಾನೋ ಆಗಿದ್ದು, ಕರ್ಮ ಜ್ಞಾನ ಭಕ್ತಿ ಪ್ರಪತ್ತಿ ಮಾರ್ಗಗಳನ್ನು ಸರಿಯಾಗಿ ಅನುಷ್ಠಿಸಲು ಅಶಕ್ತರಾದ ವ್ಯಕ್ತಿಗಳಿಗೆ, ಆಚಾರ್ಯಾನುಗ್ರಹ ಎಂಬ ಐದನೆಯ ಮಾರ್ಗವೇ ಅತ್ಯಂತ ಸರಳ, ಸುಲಭ, ಉತ್ತಮ ಆದ ಮಾರ್ಗ.

ಗುರುಗಳಿಂದ ಕಲಿತಾಗಲೇ ಜ್ಞಾನವು ಪೂರ್ಣಗೊಂಡು ಸ್ಪಷ್ಟವಾಗುತ್ತದೆ ಹಾಗೂ ಗುರುವನ್ನು ಹೊಂದಿದವನು ಮಾತ್ರ ಜ್ಞಾನಿ ಎನಿಸಿಕೊಳ್ಳಬಲ್ಲ– ಎಂದು ಛಾಂದೋಗ್ಯ ಉಪನಿಷತ್ತು ಹೇಳುತ್ತದೆ; ದೇವರನ್ನು ತುಂಬಾ ಪ್ರೀತಿಸಿ, ಗುರುವನ್ನು ದೇವರಂತೆಯೇ ಪ್ರೀತಿಸಿದವನು ಮಾತ್ರ ಶ್ರೇಷ್ಠ ಜ್ಞಾನವನ್ನು ಪಡೆಯಲು ಅರ್ಹ–ಎಂದು ಕಠೋಪನಿಷತ್ತು ಸಾರುತ್ತದೆ; ಆಚಾರ್ಯ ಪೂಜೆಯು ಶಿಷ್ಯನಿಗೆ ಇರಲೇಬೇಕಾದ ಉತ್ತಮ ಮನೋಭಾವ– ಎಂದು ಭಗವದ್ಗೀತೆ ತಿಳಿಸುತ್ತದೆ; ಗುರುಗಳ ಬಗ್ಗೆ ಭಕ್ತಿ, ವಿಧೇಯತೆ ತೋರಿಸಿರುವ ಅನೇಕ ಕಥೆಗಳು ಪುರಾಣಗಳಲ್ಲಿ ಬಂದಿವೆ; ಗುರುವು ಕಲಿಸದಿದ್ದರೂ, ಗುರುವಿನ ಪ್ರತಿಮೆಯ ಪೂಜೆಯ ಪ್ರಭಾವದಿಂದ ಗುರುವಿನ ಅನುಗ್ರಹವಾಗಿ ವಿದ್ಯೆ ಸಿದ್ಧಿಸಿತೆಂಬುದು ಏಕಲವ್ಯನ ಕಥೆಯಿಂದ ತಿಳಿದು ಬರುತ್ತದೆ. ಆದಕಾರಣ ಹಿಂದೂ ಧರ್ಮದಲ್ಲಿ ಶಿಷ್ಯನ ಬುದ್ಧಿ ಕುಶಲತೆಗಳಿಗಿಂತ, ಗುರುವಿನ ನೇರ ಸಂಪರ್ಕದಿಂದ ಆಗುವ ಪ್ರಭಾವ–ಸ್ಫೂರ್ತಿಗಳೇ ಮುಖ್ಯವಾದುದೆಂದು ಗಣಿಸಲ್ಪಟ್ಟಿದೆ.

"ಗು" ಶಬ್ದಸ್ತ್ವಂಧಕಾರಸ್ಸ್ಯಾತ್, "ರು" ಶಬ್ದಸ್ತನ್ನಿರೋಧಕಃ ।
ಅಂಧಕಾರ ನಿರೋಧಿತ್ವಾತ್, ಗುರುರಿತ್ಯಭಿಧೀಯತೇ ॥೧॥

ಆಚಾರ್ಯಸ್ಸಹರಿಸ್ಸಾಕ್ಷಾಚ್ಚರರೂಪೀನ ಸಂಶಯಃ ।
ಮಗ್ನಾನುದ್ಧರತೇ ಲೋಕಾನ್ಕಾರುಣ್ಯಾಚ್ಛಾಸ್ತ್ರಪಾಣಿನಾ ॥೨॥

ಯಥಾಗುರು ಸ್ತಥೈವೇಶೋ ಯಥೈವೇಶಸ್ತಥಾಗುರುಃ ।
ಪೂಜನೀಯೋ ಮಹಾಭಕ್ತ್ಯಾ ನ ಭೇದೋ ವಿದ್ಯತೇsನಯೋಃ ॥೩॥

ಗುರುಬ್ರಹ್ಮಾ ಗುರುರ್ವಿಷ್ಣು ಗುರುರ್ದೇವ ಸದಾಚ್ಯುತಃ ।
ನಗುರೋರಧಿಕಃ ಕಶ್ಚಿತ್ತ್ರಿಷು ಲೋಕೇಷು ವಿದ್ಯತೇ ॥೪॥

ಆಪಾದಮೌಳಿ ಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿಚ ಮನೋರಥಾಃ ॥೫॥

ಆಚಿನೋತಿಹಿ ಶಾಸ್ತ್ರಾರ್ಥಾನ್ ಆಚಾರೇ ಸ್ಥಾಪಯತ್ಯಪಿ ।
ಸ್ವಯಮಾಚರತೇ ಯಸ್ಮಾತ್ ತಸ್ಮಾದಾಚಾರ್ಯ ಉಚ್ಯತೇ ॥೬॥

ಆಚಾರ್ಯಸ್ಯ ಪ್ರಸಾದೇನ ಮಮ ಸರ್ವಮಭೀಪ್ಸಿತಂ ।
ಪ್ರಾಪ್ಸ್ಯಾಮಿತಿ ವಿಶ್ವಾಸೋ ಯಸ್ಯಾಸ್ತಿ ಸ ಸುಖೀ ಭವೇತ್ ॥೭॥

ಮೇಲಿನ ಶ್ಲೋಕಗಳು ಗುರು ಎಂಬ ಶಬ್ದದ ಅರ್ಥ, ಅದರಿಂದಾಗುವ ಉಪಕಾರ ಎಲ್ಲವನ್ನೂ ತಿಳಿಸುತ್ತವೆ.

ಮುಖ್ಯವಾಗಿ ಯಾರು ಸಕಲ ಶಾಸ್ತ್ರಗಳ ಅರ್ಥವನ್ನು ಸರಿಯಾಗಿ ತಿಳಿದು ಕೊಂಡು, ಸಾರವನ್ನು ಸಂಗ್ರಹಿಸಿ, ತಾವು ಕಲಿತ ವಿದ್ಯೆಯು ಮಾನವ ಕೋಟಿಯ ಕಲ್ಯಾಣಕ್ಕಾಗಿ ವಿನಿಯೋಗವಾಗಲಿ ಎಂಬ ಸದುದ್ದೇಶದಿಂದ ಶಿಷ್ಯ ರಿಗೆ ಸುಲಭವಾದ ತಂತ್ರದಿಂದ ಬೋಧಿಸುವರೋ; ಯಾರು ತನ್ನನ್ನು ಆಶ್ರಯಿಸಿದ ಶಿಷ್ಯರಿಗೆ ಬೋಧಿಸುವುದರಿಂದ ಮಾತ್ರ ತೃಪ್ತರಾಗದೆ, ಲೌಕಿಕರಿಗೂ ಉಪದೇಶಿಸಿ ಅವರನ್ನೂ ಸರಿಯಾದ ದಾರಿಗೆ ಎಳೆದು ಸದಾಚಾರದಲ್ಲಿ ನೆಲೆ ಗೊಳಿಸುವರೋ; ಪರರಿಗೆ ಬೋಧನೆ, ಉಪದೇಶ ಮಾಡುವುದು ಸುಲಭ ವಾದರೂ, ತಾವು ಸ್ವತಃ ಆಚರಿಸಿ ತೋರಿಸುವುದು ಕಷ್ಟವಾದುದರಿಂದ, ಯಾರು ತಮ್ಮ ನಡೆ ನುಡಿಗಳಲ್ಲಿ ತಾವು ಉಪದೇಶಿಸುವ ತತ್ತ್ವಗಳೆಲ್ಲವೂ ಮೂರ್ತಿಮತ್ತಾಗಿ ಬಂದಂತೆ ಆದರ್ಶ ಜೀವನದ ಮೇಲ್ಪಂಕ್ತಿಯನ್ನು ಹಾಕಿ ಕೊಡುವರೋ; ಯಾರು ಜ್ಞಾನ ಭಕ್ತಿ ವೈರಾಗ್ಯ ಅನುಷ್ಠಾನಗಳಿಂದ ಕೂಡಿರುವರೋ—ಅಂಥವರೇ ನಿಜವಾದ ಆಚಾರ್ಯರೆಂದು ಕರೆಸಿಕೊಳ್ಳಲು

ಯೋಗ್ಯರು, ಅರ್ಹರು ಆಗುತ್ತಾರೆ. ಅಂತಹವರು ಮಾತ್ರ ಮಾತೃದೇವೋಭವ ಆದನಂತರ ಆಚಾರ್ಯ ದೇವೋಭವ ಎಂದು ಕರೆಸಿಕೊಳ್ಳಲು ಸಾಧ್ಯವಾಗುತ್ತದೆ.

ಪೂರ್ವಾಚಾರ್ಯರುಗಳಿಂದ ಹರಿದು ಬಂದಿರುವ ಜ್ಞಾನಾನುಭವಗಳ ಪ್ರವಾಹಕ್ಕೆ, ತಮ್ಮ ಜ್ಞಾನಾನುಭವಗಳ ತೊರೆಯನ್ನೂ ಸೇರಿಸಿ ಅದನ್ನು ಹಿಗ್ಗಿಸಿ, ಶಾಖೋಪಶಾಖೆಗಳಾಗಿ ಕವಲೊಡೆಯಿಸುವುದು, ಆಚಾರ್ಯರ ಮುಖ್ಯ ಕರ್ತವ್ಯ. ಆಚಾರ್ಯನೆನಿಸಿಕೊಂಡವನು ನಿರಹಂಕಾರಿ, ಪರಸಮೃದ್ಧಿಪ್ರಿಯ, ಖ್ಯಾತಿಲಾಭ ನಿರಪೇಕ್ಷಕ, ಸಮರ್ಥ, ಆಗಿರಬೇಕು. ಶಿಷ್ಯನಾಗಿರುವ ಜೀವಿಯ ವಿಷಯದಲ್ಲಿ ಪೂರ್ಣವಾದ ಕರುಣೆಯನ್ನು ಹೊಂದಿದ್ದು, ಅವನಿಗೆ ಭಗವತ್ಕೃಪೆ ಅಥವಾ ಈಶಾನುಗ್ರಹವು ಸಿಗುವಂತೆ ಶಿಫಾರಸು ಮಾಡಿ, ಚೇರ್ಪಟ್ಟಿ ಜೀವಾತ್ಮ, ಪರಮಾತ್ಮರ ನಡುವಣ ಸೇತುವೆಯೆಂದು ತನ್ನನ್ನು ಭಾವಿಸಿಕೊಂಡು, ಅವರಿಬ್ಬರನ್ನೂ ಒಂದುಗೂಡಿಸುವ ಜವಾಬ್ದಾರಿಯನ್ನೂ ತಾನೇ ಹೊತ್ತುಕೊಂಡು, ಜೀವಿಯನ್ನು ಗುರಿಯ ಕಡೆಗೆ ಮುನ್ನಡೆಸಬೇಕು.

ಮೂಲ, ದ್ವಯ ಮತ್ತು ಚರಮ ಶ್ಲೋಕ ಮಂತ್ರಗಳನ್ನು ಆಚಾರ್ಯ ಪರಾಧೀನನಾಗಿ, ಭಗವಂತನ ಕೈಂಕರ್ಯರೂಪವಾಗಿ, ನಿಸ್ಪೃಹತೆಯಿಂದ ಉಪದೇಶಿಸುವವನೇ, ಆಚಾರ್ಯರಲ್ಲಿ ಶ್ರೇಷ್ಠನಾದವನೆಂದು ಗಣಿಸಬಹುದು. ವೇದಾಂತಾರ್ಥ ಪ್ರತಿಪಾದಿತ ಜ್ಞಾನವೆಂಬ ದೀಪವು ಆರದಂತೆ ನೋಡಿಕೊಂಡು, ಸ್ವಯಂ ಪ್ರಕಾಶನಾಗಿರುವ ಭಗವತ್ಸ್ವರೂಪವನ್ನು ಉಪದೇಶಿಸಿ, ಚೇತನರಲ್ಲಿರುವ ಅಜ್ಞಾನಾಂಧಕಾರವನ್ನು ಹೋಗಲಾಡಿಸುವವರೇ ಸದಾಚಾರ್ಯರು ; ವೇದ, ತಿರುವಾಯ್ಮೊಳಿ, ಮಂತ್ರಗಳ ಅರ್ಥ ವಿಶೇಷವನ್ನು ವಿವರವಾಗಿ ತಿಳಿಸಿಕೊಟ್ಟು, ಜೀವಾತ್ಮ–ಪರಮಾತ್ಮರ ಸಂಬಂಧವನ್ನು ಬಿಗಿಪಡಿಸಿ, ಚೇತನರನ್ನು ಅರ್ಹರಾಗಿ ಮಾಡುವವರು ಉಪಕಾರಕ ಆಚಾರ್ಯರು; ಸಮಾಶ್ರಯಣ ಮತ್ತು ಮಂತ್ರೋಪದೇಶ ಮಾಡಿ, ಚೇತನರನ್ನು ಉದ್ಧಾರ ಮಾಡುವವರು ಉತ್ತಾರಕ ಆಚಾರ್ಯರು.

ಆತ್ಮ ಸಾಕ್ಷಾತ್ಕಾರವೇ ಮಾನವನ ಪರಮ ಗುರಿಯಾಗಿದ್ದ ಕಾಲದಲ್ಲಿ, ಅನುಷ್ಠಾನವೇ ಮುಖ್ಯ ಸಾಧನವಾಗಿದ್ದ ಕಾಲದಲ್ಲಿ, ಆಚಾರ್ಯರು ಶಿಷ್ಯನನ್ನು ಸರಿಯಾಗಿ ಪರೀಕ್ಷಿಸಿ ಉಪದೇಶಿಸುವ ಪದ್ಧತಿ ಇದ್ದಿತು. ಹೇಳಿಕೊಟ್ಟುದನ್ನು ಸರಿಯಾಗಿ ತಿಳಿದುಕೊಳ್ಳುವ, ಅದನ್ನು ಇತರರಿಗೆ ಸರಿಯಾಗಿ ಹೇಳಿಕೊಡುವ, ಮಾನಸಿಕ ಶಕ್ತಿ ಇದ್ದವರಿಗೆ ಮಾತ್ರ ಗುರುಗಳ ಉಪದೇಶ, ಅನುಗ್ರಹ ಸಿಗುತ್ತಿದ್ದಿತು. ತಪಸ್ಸು-ಭಕ್ತಿ ಇಲ್ಲದವನಿಗೆ, ಭಗವಂತನನ್ನು ಗಾಢವಾಗಿ ಪ್ರೀತಿಸದವನಿಗೆ, ವೇದಗಳನ್ನು ನಂಬದವನಿಗೆ, ಸುಳ್ಳುಗಾರ, ವಂಚಕ, ಸೋಮಾರಿ, ಅಹಂಕಾರಿ, ವಕ್ರ ಬುದ್ಧಿಯುಳ್ಳವ, ಪರಪೀಡಕ, ಆದವರಿಗೆ ಉಪದೇಶಿಸಬಾರದೆಂಬ ನಿಯಮವಿದ್ದಿತು. ಈ ಎಲ್ಲ ಕಾರಣಗಳಿಂದ ಅಚ್ಚಾದ ಪುಸ್ತಕಗಳು ಇಲ್ಲದಿದ್ದ, ಕೆಲವೇ ಹಸ್ತ ಲಿಖಿತ ಪುಸ್ತಕಗಳು ಇದ್ದ, ಹಿಂದಿನ ಕಾಲದಲ್ಲಿ, ಉಪದೇಶವು ರಹಸ್ಯವಾಗಿದ್ದು ಕೆಲವರಿಗೆ ಮಾತ್ರ ಸೀಮಿತ ಗೊಂಡಿದ್ದಿತು.

ಆಚಾರ್ಯರಾದವರು ತಾವು ಮಾಡಿದ ಕಾರ್ಯಕ್ಕೆ ಪ್ರತಿಫಲವಾಗಿ ಶಿಷ್ಯ ರಿಂದ ಹಣ, ಶುಶ್ರೂಷೆಗಳನ್ನು ಅಪೇಕ್ಷಿಸಬಾರದು. ಶಿಷ್ಯನು ಒಳ್ಳೆಯ ದಾರಿಗೆ ಬಂದು ಮುಂದುವರೆಯಲಿ ಎಂಬ ದಯಾ ಬುದ್ಧಿಯಿಂದ ಮಾತ್ರ ಉಪದೇಶ ನೀಡಬೇಕು. ಶಿಷ್ಯನು ಉದ್ಧಾರವಾಗುವುದರೊಂದಿಗೆ, ತನಗೆ ಸತ್ಸಂಗ, ಭಗವತ್ಕೈಂಕರ್ಯ ಒದಗಿತು ಎಂದು ಸಂತೋಷ ಪಡಬೇಕು. ಹಿರಿಯರಾದ ಪೂರ್ವಾಚಾರ್ಯರ ದಿವ್ಯಾಜ್ಞೆಯನ್ನು ಪ್ರಚಾರ ಮಾಡುವ ಕರಣ ಗಳೇ ತಾವು ಎಂದು ತಿಳಿಯಬೇಕು, ಆದರೆ ತನ್ನ ಶಿಷ್ಯರನ್ನು ಅನುಗ್ರಹಿಸುವಾಗ ತನ್ನ ಆಚಾರ್ಯರೇ ತನ್ನ ಮೂಲಕ ಈ ಶಿಷ್ಯರನ್ನು ಅನುಗ್ರಹಿಸುತ್ತಿದ್ದಾರೆ, ತಾನು ಯಾವ ತತ್ತ್ವಗಳನ್ನೂ ಕಂಡು ಹಿಡಿದಿಲ್ಲ, ತನ್ನ ಎಲ್ಲ ಶಕ್ತಿ-ಸ್ಫೂರ್ತಿ ಗಳಿಗೂ ತನ್ನ ಆಚಾರ್ಯರೇ ಮೂಲ, ತಾನು ಕೇವಲ ನಿಮಿತ್ತ ಮಾತ್ರ, ಶಿಷ್ಯರನ್ನು ರಕ್ಷಿಸುವುದೆಂದರೆ ತನ್ನ ಸ್ವರೂಪವನ್ನು ರಕ್ಷಿಸಿದಂತೆ—ಎಂದು ಆಚಾರ್ಯನಾದವನು ತಿಳಿಯುವುದು ಶ್ರೀವೈಷ್ಣವ ಧರ್ಮದ ಪರಮ ಲಕ್ಷಣ.

"ಆಚಾರ್ಯರು ಭಗವಂತನಿಗೆ ಅತಿ ಹತ್ತಿರದ ವ್ಯಕ್ತಿಗಳು ಹಾಗೂ ಆತನ ಹೃದಯವನ್ನು ಅರಿತ ದಿವ್ಯ ಜ್ಞಾನಿಗಳು, ಭಗವಂತನ ಕರುಣೆಯು ಆಚಾರ್ಯರುಗಳ ಮೂಲಕ ಪ್ರವಹಿಸಿ, ಅವರುಗಳ ಅನುಷ್ಠಾನ ಮತ್ತು ಕೃತಿಗಳ ಮೂಲಕ, ಚೇತನರು ಭಗವತ್ತತ್ತ್ವವನ್ನು ತಿಳಿದುಕೊಳ್ಳುವಂತೆ ಮಾಡಿ ಅವರನ್ನು ಮೇಲಕ್ಕೆ ಎತ್ತುತ್ತದೆ. ಆಚಾರ್ಯರುಗಳ ಸೂಕ್ತಿಯಲ್ಲಿ ಚೇತನೋದ್ಧಾರೋಪಯುಕ್ತವಾದ ತತ್ತ್ವಹಿತ ಪುರುಷಾರ್ಥ ಬೋಧಕ ಗುಣಗಳು ಅಡಗಿರುತ್ತವೆ. ಆದುದರಿಂದಲೇ ಆಚಾರ್ಯನಲ್ಲಿ ಭಕ್ತಿ ಪೂರ್ವಕವಾದ ಆಶ್ರಯಣವು, ಜ್ಞಾನ ಮತ್ತು ಸದ್ಗುಣಗಳನ್ನು ಉತ್ಪಾದಿಸಿ, ಮೋಕ್ಷವನ್ನು ಕೊಡಿಸಬಲ್ಲುದು.

ಮೂಲ ಮಂತ್ರ, ದ್ವಯ ಮಂತ್ರ, ಚರಮ ಶ್ಲೋಕ ಮಂತ್ರ— ಈ ರಹಸ್ಯತ್ರಯದಲ್ಲಿ ಸಕಲ ವೇದಾಂತಾರ್ಥಗಳೂ ಅಡಗಿವೆ. ಸದಾಚಾರ್ಯರಿಂದ ಗ್ರಹಿಸಿದ ಇವನ್ನು ಅನುಸಂಧಾನ ಮಾಡಿ, ತನ್ನ ಸ್ವರೂಪಹಿತಗಳನ್ನು ಅರಿತು, ನಂಬಿಕೆ ಇಟ್ಟು ಜೀವಿಸುವುದೇ ಸಾರ್ಥಕವಾದ ಬಾಳು. ಆಚಾರ್ಯರ ಮೂಲಕ ಭರಸಮರ್ಪಣೆ ಮಾಡಿ, ಭಗವಂತನಲ್ಲಿ ಶರಣು ಹೋಗುವುದು ಸರ್ವೋತ್ಕೃಷ್ಟವಾದ ಮಾರ್ಗ. ನಮ್ಮ ರಕ್ಷಣೆಯ ಭಾರವನ್ನು ಆಚಾರ್ಯರಲ್ಲಿ ಸಮರ್ಪಿಸಿ, ಅವರು ನಮಗಾಗಿ, ಭಗವಂತನಿಗೆ ನಮ್ಮನ್ನು ಸ್ವೀಕರಿಸಲು ಪ್ರಾರ್ಥಿಸುವಂತೆ, ಕೇಳಿಕೊಳ್ಳಬೇಕು. ಪರಮಪದದಲ್ಲಿರುವಾಗಲೂ ಆಚಾರ್ಯ ಸಾನ್ನಿಧ್ಯದಲ್ಲಿ ಮಾಡುವ ಕೈಂಕರ್ಯವು, ಭಗವಂತನಿಗೆ ಅತ್ಯಂತ ಪ್ರೀತಿಕರವಾಗಿರುತ್ತದೆ.

ಈ ಎಲ್ಲ ಕಾರಣಗಳಿಂದ ನಮ್ಮ ಆಚಾರ್ಯರಲ್ಲಿ ಭಕ್ತಿ ಇಟ್ಟು ಅವರನ್ನು ಕೊಂಡಾಡುವುದೇ, ಅವರಿಂದ ನಾವು ಪಡೆದ ಉಪಕಾರಕ್ಕೆ ಮಾಡುವ ಪ್ರತ್ಯುಪಕಾರ ಎಂದು ತಿಳಿದು, ಜೀವನವನ್ನು ಕೃತಾರ್ಥವನ್ನಾಗಿ ಮಾಡಿಕೊಳ್ಳಬೇಕು." ಇದು ವೇದಾಂತ ದೇಶಿಕರು ಆಚಾರ್ಯರ ಬಗ್ಗೆ ಹೇಳಿರುವ ಅಭಿಪ್ರಾಯ.

ಆದರೂ ಆಚಾರ್ಯರಾದವರು ಶಿಷ್ಯನಿಗೆ ಬೇಕಾದುದೆಲ್ಲವನ್ನೂ ಹೇಳಿ ಕೊಡಲು ಸಾಧ್ಯವಾಗಲಾರದು. ಕಲಿಯುವಿಕೆಯಲ್ಲಿ ಶಿಷ್ಯನ ಪಾತ್ರವೂ ಮಹತ್ತರವಾದುದೇ.

ಆಚಾರ್ಯಾತ್ಪಾದಮಾದತ್ತೇ, ಪಾದಂ ಶಿಷ್ಯಸ್ವಮೇಧಯಾ ।
ಪಾದಂ ಸಬ್ರಹ್ಮಚಾರಿಭ್ಯಃ, ಪಾದಂ ಕಾಲಕ್ರಮೇಣತು ॥

ಎಂಬಂತೆ, ಶಿಷ್ಯನಾದವನು ತನ್ನ ಬುದ್ಧಿಯನ್ನು ಉಪಯೋಗಿಸಿ, ಸಮಾಜವನ್ನು ವೀಕ್ಷಿಸಿ, ಗ್ರಂಥಗಳ ವ್ಯಾಸಂಗ ಮಾಡಿ, ಸತ್ಸಂಗದಲ್ಲಿದ್ದು ತರ್ಕ ಮಾಡುತ್ತ ಕಲಿಯಬೇಕಾದುದೂ ಬಹಳವಿದೆ. ಸರ್ವಧರ್ಮಗಳ ಅನು ಯಾಯಿಗಳೂ ಒಪ್ಪುವ ಕಠೋರ ಸತ್ಯವನ್ನು ಹೇಳಬಲ್ಲವನು ಮಾತ್ರ ಬ್ರಹ್ಮೋಪಾಸನೆಗೆ ಯೋಗ್ಯನಾದ ಶಿಷ್ಯ ಎಂಬುದು ಪ್ರಾಚೀನ ಗುರುಗಳ ಅಭಿಪ್ರಾಯವಾಗಿದ್ದಿತು. ಪರಿಶುದ್ಧ ಜೀವನವನ್ನು ನಡೆಸಿ, ಗುರುಸೇವೆ ಮಾಡಿ, ಕಠಿಣ ಪರೀಕ್ಷೆಗೊಳಗಾಗಿ, ಶ್ರದ್ಧಾಭಕ್ತಿ ಆಸಕ್ತಿಗಳಿಂದ, ನಿರಹಂಕಾರಿ ಯಾದ, ಶಿಷ್ಯನು ಪ್ರಶ್ನೆಗಳನ್ನು ಕೇಳಿದಾಗ ಮಾತ್ರ, ಗುರುವಿನ ಮನಸ್ಸಿನಲ್ಲಿ ಹಳೆಯ ಉಕ್ತಿಗಳಿಗೆ, ಹೊಸ ಹೊಸ ಭಾವನೆಗಳು, ಅರ್ಥ ವಿಶೇಷಗಳು ಸ್ಫುರಿಸುತ್ತವೆ ಎಂಬುದು ಹಿರಿಯರ ಅನುಭವಾಮೃತ. ಗುರು ಶಿಷ್ಯರು, ತಂದೆ ಮಕ್ಕಳಂತಿದ್ದು, ಕಲಿವು ನಡೆಯಬೇಕು. ಇಬ್ಬರೂ ತಮ್ಮ ತಮ್ಮ ಸ್ವರೂಪ ಗಳನ್ನು ಬಹು ಎಚ್ಚರಿಕೆಯಿಂದ ರಕ್ಷಿಸಿಕೊಂಡು, ಪರಸ್ಪರ ಹಿತಾಸಕ್ತಿ ಕಾರ್ಯದಲ್ಲಿ ನಿರತರಾಗಿರಬೇಕು ಎಂಬುದು ಉಪನಿಷತ್ತುಗಳಲ್ಲಿ ಕಾಣಬರುವಂತಹ ಗುರು ಶಿಷ್ಯ ಸಂಬಂಧ, ಅಂತಹವರಿದ್ದಾಗಲೇ ಶಿಷ್ಯನೂ ಉದ್ಧಾರವಾಗಬಲ್ಲ, ಆಚಾರ್ಯನ ಸ್ವರೂಪವೂ ಸಿದ್ಧಿಸಬಲ್ಲುದು.

ಸಹನಾವವತು । ಸಹನೌಭುನಕ್ತು । ಸಹವೀರ್ಯಂಕರವಾವಹೈ ।
ತೇಜಸ್ವಿನಾವಧೀತಮಸ್ತು । ಮಾವಿದ್ವಿಷಾವಹೈ ।

ಓಂ ಶಾಂತಿಃ ಶಾಂತಿಃ ಶಾಂತಿಃ ॥

ಎಂಬಂತೆ ಗುರು ಶಿಷ್ಯರಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ, ಜೊತೆಯಲ್ಲಿ ಪೋಷಿಸಲಿ, ಜೊತೆಯಲ್ಲಿ ಸಾಮರ್ಥ್ಯವನ್ನುಂಟು ಮಾಡಲಿ, ಅಧ್ಯಯನವು ವಿಕಾಸಗೊಳ್ಳಲಿ, ದ್ವೇಷವಿಲ್ಲದಂತಾಗಲಿ, ಶಾಂತಿ ಇರಲಿ–ಎಂಬುದೇ ಆ ಪ್ರಾಚೀನ ಕಾಲದ ಗುರುಕುಲದ ಅಧ್ಯಯನ ಕಾಲದಲ್ಲಿ ಗುರು ಶಿಷ್ಯರ ಪ್ರಾರ್ಥನೆ ಆಗಿದ್ದಿತು.

ಗುರು ಶುಶ್ರೂಷಯಾವಿದ್ಯಾ ಎನ್ನುವಂತೆ ಶಿಷ್ಯನು, ತನ್ನ ಸೇವಾಕಾರ್ಯಗಳಿಂದ ಆಚಾರ್ಯನನ್ನು ಸಂತೋಷಪಡಿಸಿ ಜ್ಞಾನವನ್ನು ಗಳಿಸಬೇಕು. ಭಗವದ್ವಿಷಯವನ್ನು ಅಂಗೈಯ ನೆಲ್ಲಿಕಾಯಿನಂತೆ ತೋರಿಸಿಕೊಟ್ಟ ಆಚಾರ್ಯನಲ್ಲಿಯೂ, ಅಂತಹ ಯೋಗ್ಯ ಆಚಾರ್ಯನನ್ನು ಒದಗಿಸಿಕೊಟ್ಟ ಭಗವಂತನಲ್ಲಿಯೂ, ಉಪಕಾರಸ್ಮೃತಿ ಅಥವಾ ಕೃತಜ್ಞತೆ ಹೊಂದಿರುವುದು ಮತ್ತು ಅವರನ್ನು ಸ್ತೋತ್ರಮಾಡುವುದು, ಯೋಗ್ಯ ಶಿಷ್ಯನ ಲಕ್ಷಣ ಹಾಗೂ ಕರ್ತವ್ಯ.

ತಾನೇ ಸೃಷ್ಟಿಸಿದ ಚತುರ್ಮುಖಬ್ರಹ್ಮನಿಗೆ ವೇದಗಳನ್ನು ಉಪದೇಶಿಸಿ, ಆ ವೇದಗಳನ್ನು ಮಧುಕೈಟಭರೆಂಬ ರಾಕ್ಷಸರಿಂದ ರಕ್ಷಿಸಿ, ಹಂಸ, ಹಯಗ್ರೀವ, ನಾರಾಯಣ ಎಂಬೀ ಅವತಾರಗಳ ಮೂಲಕ ಹಿತೋಪದೇಶವನ್ನು ಕರುಣಿಸಿ. ಮನುವಿನ ಮೂಲಕ ಧರ್ಮಶಾಸ್ತ್ರವನ್ನು ತಿಳಿಸಿ, ನಾರದ, ಪರಾಶರ, ಶುಕ, ಶೌನಕ ಇವರ ಮೂಲಕ ಸಂಪ್ರದಾಯವನ್ನು ಕಲಿಸಿ, ವಾಲ್ಮೀಕಿ, ವ್ಯಾಸ ಮುಂತಾದವರಲ್ಲಿ ಅಂತರ್ಯಾಮಿಯಾಗಿ ನೆಲೆಸಿ, ಅವರಿಂದ ರಾಮಾಯಣ. ಮಹಾಭಾರತ, ಭಗವದ್ಗೀತೆ, ಬ್ರಹ್ಮಸೂತ್ರ ಮುಂತಾದ ಉತ್ತಮೋತ್ತಮ ಗ್ರಂಥಗಳು ರಚಿತವಾಗುವಂತೆ ಮಾಡಿ, ವರಾಹ, ಶ್ರೀರಾಮ, ಶ್ರೀಕೃಷ್ಣ ಎಂಬೀ ಅವತಾರಗಳ ಕಾಲದಲ್ಲಿ ಚರಮ ಶ್ಲೋಕಗಳನ್ನು ಉಪದೇಶಿಸಿ, ಸಂರಕ್ಷಿಸಿದ ಭಗವಂತನಾದ ನಾರಾಯಣನೇ ನವ ಗೆ ಆದಿಗುರು, ಪರತತ್ತ್ವ, ಪರಮಹಿತ, ಪರಮ ಪುರುಷಾರ್ಥ ಆಗಿದ್ದಾನೆ

ಶ್ರೀಮನ್ನಾರಾಯಣನಿಂದ ವಿಶಿಷ್ಟಾದ್ವೈತ ತತ್ತ್ವವೆಂಬ ಆತ್ಮವಿದ್ಯೆಯ ರಹಸ್ಯವನ್ನು ಪಡೆದ ವಿಷ್ಣುಪತ್ನಿಯಾದ ಮಹಾಲಕ್ಷ್ಮಿಯೇ ನಮ್ಮ ಆಚಾರ್ಯ

ಪರಂಪರೆಯಲ್ಲಿ ಎರಡನೆಯದು. ಮಹಾಲಕ್ಷ್ಮಿಯಿಂದ ವಿಷ್ವಕ್ಸೇನರಿಗೆ, ವಿಷ್ವಕ್ಸೇನರಿಂದ ನಮ್ಮಾಳ್ವಾರರಿಗೆ, ನಮ್ಮಾಳ್ವಾರರಿಂದ ಯೋಗದೆಸೆಯಲ್ಲಿ ನಾಥಮುನಿಗೆ, ನಾಥಮುನಿಗಳಿಂದ ಪುಂಡರೀಕಾಕ್ಷ ಮತ್ತು ರಾಮಮಿಶ್ರರ ಮೂಲಕ ಯಾಮುನರಿಗೆ, ಯಾಮುನರಿಂದ ಮಹಾಪೂರ್ಣರ ಮೂಲಕ ರಾಮಾನುಜರಿಗೆ ಉಪದೇಶಿಸಲ್ಪಟ್ಟು, ನಂತರ ಗುರುಶಿಷ್ಯ ಪರಂಪರೆಯಾಗಿ ಪ್ರವರ್ತಿಸಲ್ಪಟ್ಟು ಬರುತ್ತಿದೆ ಈ ವಿಶಿಷ್ಟಾದ್ವೈತ ತತ್ತ್ವ. ಜೀವಾತ್ಮರು ಮೋಕ್ಷ ಹೊಂದಬೇಕಾದರೆ, ರಾಮಾನುಜರ ಪಾದಗಳನ್ನು ಆಶ್ರಯಿಸಿದ ಆಚಾರ್ಯರನ್ನು, ರಹಸ್ಯ ಮಂತ್ರಾರ್ಥ, ಶ್ರೀಭಾಷ್ಯ, ಭಗವದ್ವಿಷಯ, ನಲ್ಲಾನ್ ಚಕ್ರವರ್ತಿ, ತಾತಾಚಾರ್ಯ, ಶೋಮಾಶಿಯಾಂಡಾನ್, ಯತಿರಾಜಮಠ, ಪರಕಾಲಮಠ, ಅಹೋಬಿಲಮಠ, ಆಂಡವನ್ ಆಶ್ರಮ ಎಂಬೀ ತಮ್ಮ ತಮ್ಮ ಸಂಪ್ರದಾಯಕ್ಕನುಗುಣವಾಗಿ ತಿಳಿದುಕೊಂಡು, ಆಚಾರ್ಯ ಪರಂಪರೆಯನ್ನು ಭಗವಂತನವರೆಗೂ ಅನುಸಂಧಾನಮಾಡಬೇಕು ಶಿಷ್ಯರಾದವರು ತಮ್ಮ ಆಚಾರ್ಯ ಪರಂಪರೆಯನ್ನು ಸ್ಮರಿಸಿ ಕೊಂಡಾಡುವುದು, ಪ್ರಾಚೀನ ಕಾಲದಿಂದಲೂ ಬಂದಿರುವ ಸಂಪ್ರದಾಯ. ಗುರುಸ್ಮರಣೆಯಿಂದ ಶಿಷ್ಯರಿಗೆ ಶ್ರೇಯಸ್ಸು ಉಂಟಾಗುವುದರಲ್ಲಿ ಸಂದೇಹವಿಲ್ಲ.

ಲಕ್ಷ್ಮೀನಾಥ ಸಮಾರಂಭಾಂ ನಾಥಯಾಮುನಮಧ್ಯಮಾಂ ।
ಅಸ್ಮದಾಚಾರ್ಯ ಪರ್ಯಂತಾಂ ವಂದೇ ಗುರುಪರಂಪರಾಂ ॥

ಎಂಬಂತೆ ದೇವರಿಂದ ಹಿಡಿದು ತಮ್ಮ ಗುರುವಿನವರೆಗಿನ ಅವರೋಹಣ ಕ್ರಮದಲ್ಲಿಯೋ ಅಥವಾ

ಅಸ್ಮದ್ಗುರು ಸಮಾರಂಭಾಂ ಯತಿಶೇಖರ ಮಧ್ಯಮಾಂ ।
ಲಕ್ಷ್ಮೀವಲ್ಲಭ ಪರ್ಯಂತಾಂ ವಂದೇ ಗುರುಪರಂಪರಾಂ ॥

ಎಂಬಂತೆ ತಮ್ಮ ಗುರುವಿನಿಂದ ಹಿಡಿದ ದೇವರವರೆಗಿನ ಆರೋಹಣ ಕ್ರಮದಲ್ಲಿಯೋ ಅನುಸಂಧಾನ ಮಾಡಬಹುದು.

ಅಸ್ಮದ್ದೇಶಿಕ ಮಸ್ಮದೀಯ ಪರಮಾಚಾರ್ಯಾನಶೇಷಾನ್ ಗುರೂನ್
ಶ್ರೀಮಲ್ಲಕ್ಷ್ಮಣ ಯೋಗಿಪುಂಗವ ಮಹಾಪೂರ್ಣೌ ಮುನಿಂ ಯಾಮುನಂ ।
ರಾಮಂ ಪದ್ಮವಿಲೋಚನಂ ಮುನಿವರಂ ನಾಥಂ ಶಠದ್ವೇಷಿಣಂ
ಸೇನೇಶಂ ಶ್ರಿಯಮಿಂದಿರಾಸಹಚರಂ ನಾರಾಯಣಂ ಸಂಶ್ರಯೇ ॥

ಎಂಬೀ ಸಂಸ್ಕೃತದಲ್ಲಿನ ಶ್ರೀ ವೈಷ್ಣವರ ನಿತ್ಯದ ಅನುಸಂಧಾನವನ್ನು ವೇದಾಂತದೇಶಿಕರು ತಮಿಳಿನಲ್ಲಿ ಹೀಗೆ ಹೇಳಿದ್ದಾರೆ.

ಎನ್ನುಯಿರ್ ತಂದಳಿತ್ತವರೈಚ್ಚರಣಂಪುಕ್ಕು
ಯಾನಡೈವೇಯವರ್ ಕುರುಕ್ಕಳ್‌ನೈರೈವಣಂಗಿ
ಪಿನ್ನರುಳಾಲ್ ಪೆರಂಬೂದೂರ್‌ವಂದ ವಳ್ಳಲ್
ಪೆರಿಯನಂಬಿ ಆಳವಂದಾರ್ ಮಣಕ್ಕಾಲ್ ನಂಬಿ
ನನ್ನರಿಯ್ಯೈಯವರ್ಕ್ಕುರೈತ್ತ ಉಯ್ಯಕ್ಕೊಂಡಾರ್
ನಾಥಮುನಿ ಶಠಗೋಪನ್ ಸೇನೈನಾಥನ್
ಇನ್ನಮುದಲ್ ತಿರುಮಗಳೆನ್ನವರೈಮುನ್ನಿಟ್ಟು
ಎಂಬೆರುಮಾನ್ ತಿರುವಡಿಗಳಡೈಗಿನ್ರೇನೇ ॥

By the Designing and Directing Power known as Narayana and Mahalakshmi, the vedic Religion or Sanatanadharma, Comprising its Philosophy, Ethics and Rituals, is maintained by continuous lines of Acharyas, under whose care and activity, it has remained vitally one and unaltered, ಎಂದು ಪಾಶ್ಚಾತ್ಯ ವಿದ್ವಾಂಸರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿರುತ್ತಾರೆ.

ನಾಥಮುನಿ, ಯಾಮುನಮುನಿ, ರಾಮಾನುಜಮುನಿ, ವೇದಾಂತ ದೇಶಿಕ, ಮಣವಾಳಮಾಮುನಿ ಎಂಬೀ ಪಂಚಾಚಾರ್ಯರು ತಮ್ಮ ಉಪದೇಶ ಮತ್ತು ವಿವಿಧ ಗ್ರಂಥ ರಚನೆಯಿಂದ, ವಿಶಿಷ್ಟಾದ್ವೈತ ವೇದಾಂತ ಮತ್ತು ಶ್ರೀ ವೈಷ್ಣವಮತ ಎರಡನ್ನೂ ರೂಪಿಸಿ, ಬೆಳೆಸಿ, ಪ್ರಚಾರಮಾಡಿ, ಮಹೋಪಕಾರ

ಮಾಡಿರುವುದರಿಂದ, ಇವರ ವಿಷಯದಲ್ಲಿ ಶ್ರೀ ವೈಷ್ಣವರು ಅತ್ಯಧಿಕವಾದ ಭಕ್ತಿಯನ್ನಿಡಬೇಕು.

## ಅಧ್ಯಾಯ ೨ = ನಾಥಮುನಿ (823-924)

ಜ್ಯೇಷ್ಠಾನುರಾಧಾಸಂಭೂತಂ ವೀರನಾರಾಯಣೇಪುರೇ ।
ಗಜವಕ್ತ್ರಾಂಶಮಾಚಾರ್ಯಮಾದ್ಯಂ ನಾಥಮುನಿಂ ಭಜೇ ॥೧॥

ವ್ಯೋಮ್ನಃ ಪರಸ್ತಾತ್ತ್ರಿವಿಧಂ ಸಮೇತ್ಯ
ಲಕ್ಷ್ಮ್ಯಾ ನಿಯೋಗಾತ್ಕುರುಕಾಧಿರಾಜಃ ।
ಸಮಂತ್ರರತ್ನಂ ದ್ವಯಮಾಹಯಸ್ಮೈ
ನಾಥಾಯ ತಸ್ಮೈ ಮುನಯೇನಮೋಸ್ತು ॥೨॥

ನಮೋ ಚಿಂತ್ಯಾದ್ಭುತಾಕ್ಲಿಷ್ಟ ಜ್ಞಾನವೈರಾಗ್ಯರಾಶಯೇ ॥
ನಾಥಾಯಮುನಯೇಽಗಾಧ ಭಗವದ್ಭಕ್ತಿ ಸಿಂಧವೇ ॥೩॥

ಸಂಪ್ರದಾಯದ ಪರಂಪರೆಯು ತಪ್ಪಿಹೋಗಿ, ಶಿಥಿಲವಾಗಿ ಹರಡಿದ್ದ ವಿಶಿಷ್ಟಾದ್ವೈತ ದರ್ಶನವನ್ನು, ಯೋಗಬಲದಿಂದ ಸಾಕ್ಷಾತ್ಕರಿಸಿಕೊಂಡು, ಅದಕ್ಕೆ ಭದ್ರವಾದ ತಳಹದಿಯನ್ನು ಹಾಕಿಕೊಟ್ಟ ಕೀರ್ತಿ ನಾಥಮುನಿಗಳಿಗೆ ಸಲ್ಲುತ್ತದೆ. ಪರಿಶುದ್ಧವಾದ ಪರಿಪೂರ್ಣ ಜ್ಞಾನವನ್ನು ಹೊಂದಿ, ಪರಮ ಪ್ರಾಪ್ಯನಾದ ಪರಮಾತ್ಮನಲ್ಲಿ ಸೇರಿಕೊಳ್ಳಬೇಕೆಂಬ ತೀವ್ರ ಆಕಾಂಕ್ಷೆಯುಳ್ಳ ಜೀವಾತ್ಮರಿಗೆ, ತಮ್ಮ ಅನುಭವವನ್ನು ಉಪದೇಶಿಸಿದ ಪರೋಪಕಾರಿ ನಮ್ಮಾಳ್ವಾರರ ದಿವ್ಯ ಸಂದೇಶವನ್ನು ಪ್ರಚಾರಗೊಳಿಸಿದವರೇ ನಾಥಮುನಿ ಅಥವಾ ಶ್ರೀರಂಗದಲ್ಲಿದ್ದ ರಂಗನಾಥಾಚಾರ್ಯ ಸ್ವಾಮಿಗಳು.

ಆಳ್ವಾರುಗಳಿಂದ ರಚಿಸಿ ಹಾಡಲ್ಪಟ್ಟು, ಕೆಲಕಾಲ ಲುಪ್ತವಾಗಿದ್ದ ತಮಿಳು ಭಾಷೆಯ ಮಧುರ ಗೀತೆಗಳನ್ನು ಕಂಡುಹಿಡಿದು, ಅವುಗಳನ್ನು ವ್ಯವಸ್ಥಿತವಾಗಿ ನಾಲಾಯಿರ ದಿವ್ಯಪ್ರಬಂಧ ರೂಪದಲ್ಲಿ ಶೇಖರಿಸಿದವರು ನಮ್ಮಾಳ್ವಾರರ ಶಿಷ್ಯರೂ, ಮಧುರಕವಿಯಾಳ್ವಾರರ ಹಾಗೂ ಮಹಾಕವಿ ಕಂಬರ ಸಮಕಾಲೀನರೂ ಆದ ನಾಥಮುನಿಗಳು. ನಾಥಮುನಿಗಳು ಇಲ್ಲ ದಿದ್ದರೆ ವಿಶಿಷ್ಟಾದ್ವೈತ ದರ್ಶನ ಹಾಗೂ ಶ್ರೀ ವೈಷ್ಣವ ಧರ್ಮ ಎರಡೂ ಇರುತ್ತಿರಲಿಲ್ಲವೆಂಬುದು ನಿಜ.

ನಮ್ಮಾಳ್ವಾರರಿಂದ ತತ್ತ್ವತ್ರಯ ಮತ್ತು ರಹಸ್ಯತ್ರಯಗಳನ್ನೂ, ಆತ್ಮಾನಂದದಾಯಕವಾದ ದಿವ್ಯಪ್ರಬಂಧಗಳ ಜ್ಯೋತಿಯನ್ನೂ, ನಾಥಮುನಿ ಗಳು ಯೋಗದೆಸೆಯಲ್ಲಿ ವಿವರವಾಗಿ ಉಪದೇಶ ಪಡೆದು ಬೆಳಗಿಸಿದ ನಂತರ, ಅವೆಲ್ಲವೂ ತಮ್ಮ ಪೌತ್ರರಾದ ಯಾಮುನ ಮುನಿಗಳಿಗೆ ಲಭಿಸುವಂತೆ ಏರ್ಪಾಡು ಮಾಡಿದರು. ಹಾಗೆಯೇ ಇವೆಲ್ಲವೂ ರಾಮಾನುಜ ಮುನಿಗಳಿಗೆ ದೊರಕು ವಂತೆ ಯಾಮುನರೂ ವ್ಯವಸ್ಥೆ ಮಾಡಿದ್ದರು. ಹೀಗೆ ಈ ಮುನಿತ್ರಯರ ಪಾತ್ರವು ವಿಶಿಷ್ಟಾದ್ವೈತದ ರಕ್ಷಣೆಯಲ್ಲಿ ಬಹು ಮುಖ್ಯವಾದುದೆಂದು ವೇದಾಂತ ದೇಶಿಕರು ಅಭಿಪ್ರಾಯಪಟ್ಟಿದ್ದಾರೆ.

ವಿಷ್ಣುಸೇನಾಪತಿ ವಿಷ್ವಕ್ಸೇನರ ಮಂತ್ರಿ ಗಜಾನನರ ಅಂಶಭೂತರಾದ ನಾಥಮುನಿಗಳು, ತಮಿಳು ನಾಡಿನ ದಕ್ಷಿಣ ಆರ್ಕಾಟು ಜಿಲ್ಲೆಯ ಚಿದಂಬರ ತಾಲ್ಲೂಕಿನ ವೀರನಾರಾಯಣಪುರ ಅಥವಾ ಕಾಟ್ಟು ಮನ್ನಾರ್ ಕೋಯಿಲ್ ಎಂಬ ಊರಿನಲ್ಲಿ, ಶೊಟ್ಟೆ ವಂಶದ ಈಶ್ವರಭಟ್ಟ ಮತ್ತು ತಾಮರೈಯಾಳ್ ಮಗನಾಗಿ ಜನಿಸಿದರು. ಇವರು ಯೋಗಬಲದಿಂದ 500 ವರ್ಷಗಳ ಕಾಲ ಬದುಕಿದ್ದರೆಂದೂ ಕೆಲವರು ಹೇಳುತ್ತಾರೆ.

ದಕ್ಷಿಣ ಭಾರತದಲ್ಲಿ ಯೋಗವನ್ನು ಅರಿತು ಆಚರಿಸಿದವರಲ್ಲಿ ಕೊನೆಯವ ರಾದ ನಾಥಮುನಿಗಳಿಗೆ, ಯೋಗಶಕ್ತಿಯಿಂದಲೇ ಚಿದಚಿದೀಶ್ವರವೆಂಬ ತತ್ತ್ವ ತ್ರಯದ ನೇರ ದರ್ಶನವು ಲಭಿಸಿತು. ಸಂಸ್ಕೃತದಲ್ಲಿ ಪೂರ್ಣ ಪಾಂಡಿತ್ಯ

ಹೊಂದಿದ್ದು, ಶ್ರೀರಂಗದಲ್ಲಿದ್ದ ಪಂಡಿತ ಮಂಡಲಿಯ ಅಧ್ಯಕ್ಷರಾಗಿದ್ದರು. ತಮಿಳು ರಾಮಾಯಣದ ಕರ್ತೃವಾದ, ಎಳೆ ವಯಸ್ಸಿನ ಮಹಾಕವಿ ಕಂಬರು, ಶಠಗೋಪ ಅಥವಾ ನಮ್ಮಾಳ್ವಾರರನ್ನು ಕುರಿತ ಒಂದುನೂರು ಪದ್ಯಗಳನ್ನು ರಚಿಸಿ, ಅದಕ್ಕೆ ಆ ಕಾಲದ ಪದ್ಧತಿಯಂತೆ, ವೃದ್ಧರಾದ ನಾಥಮುನಿಗಳ ಮೆಚ್ಚುಗೆಯನ್ನು ಪಡೆದರು.

ನಾಥಮುನಿಗಳು ಒಮ್ಮೆ ಮನ್ನಾರ್‌ಗುಡಿಯ ವಿಷ್ಣು ದೇವಾಲಯಕ್ಕೆ ಭೇಟಿಕೊಟ್ಟಾಗ, ಕುಂಭಕೋಣದ ವಿಷ್ಣು ದೇವರನ್ನು ಕುರಿತು ನಮ್ಮಾಳ್ವಾರರು ಹಾಡಿದ ಸಾವಿರ ಪದ್ಯಗಳಲ್ಲಿ ಹತ್ತು ಪಾಶುರಗಳನ್ನು ಬ್ರಾಹ್ಮಣರು ಹೇಳುತ್ತಿದ್ದರು. ಅವರ ಸಲಹೆಯಂತೆ, ದೇವಗಾನದಲ್ಲಿ ಪರಿಣತರಾಗಿದ್ದ ನಾಥಮುನಿಗಳು, ನಮ್ಮಾಳ್ವಾರರ ಮುಖ್ಯ ಶಿಷ್ಯ ಮಧುರ ಕವಿಯಾಳ್ವಾರರು ಗುರುಗಳ ಮೇಲೆ ರಚಿಸಿದ್ದ "ಕಣ್ಣಿನುಣ್ ಶಿರತ್ತಾಂಬು" ಎಂಬ ಗೀತೆಯನ್ನು ಹನ್ನೆರಡು ಸಾವಿರ ಸಲ ಹಾಡಿ, ಆ ಮೂಲಕ ನಮ್ಮಾಳ್ವಾರರಿಂದಲೇ ಯೋಗ ದೆಸೆಯಲ್ಲಿ ಆಳ್ವಾರುಗಳು ರಚಿಸಿದ ಪ್ರಬಂಧವನ್ನೆಲ್ಲಾ ಕಲಿತರು ಆಮೇಲೆ ಅವುಗಳನ್ನು ಸಂಗೀತಕ್ಕೆ ಅಳವಡಿಸಿ, ಶ್ರೀ ವೈಷ್ಣವ ದೇವಾಲಯಗಳ ಪೂಜಾ ಸಮಯದಲ್ಲಿ ಹಾಗೂ ರಥೋತ್ಸವಾದಿ ವಿಶೇಷ ದಿನಗಳಲ್ಲಿ ಹಾಡುವ ಪದ್ಧತಿಯನ್ನು ಜಾರಿಗೆ ತಂದರು. ತಮಿಳು ವೇದವೆನಿಸಿದ ದಿವ್ಯಪ್ರಬಂಧವನ್ನು ಸಂಸ್ಕೃತ ವೇದದ ಸಾಮಗಾನದಂತೆ ಮತ್ತು ರಾಗ ತಾಳಗಳಿಂದ ಕೂಡಿದ ಮನುಷ್ಯ ಗಾನದಂತೆ ಹಾಡುವ ಈ ಕೆಲಸದಲ್ಲಿ ನಾಥಮುನಿಗಳಿಗೆ ಅವರ ಸೋದರಳಿಯಂದಿರುಗಳಾದ ಮೇಳೈಯಾಗತ್ತಾಳ್ವಾರ್ (ಮಣವಾಳಪ್ಪೆರುಮಾಳ್ ಅರೈಯರ್) ಮತ್ತು ಕೀಳೈಯಾಗತ್ತಾಳ್ವಾರ್ (ನಾದವಿನೋದ ಅರೈಯರ್) ಇಬ್ಬರೂ ತುಂಬಾ ನೆರವು ನೀಡಿದರು. ಹೀಗೆ ನಾಥಮುನಿಗಳು ತಮ್ಮ ಜೀವನದ ಗುರಿಯಾದ ಆಳ್ವಾರುಗಳ ದಿವ್ಯಪ್ರಬಂಧ ರಕ್ಷಣೆಯ ಮಹಾ ಕಾರ್ಯವನ್ನು ಸಾಧಿಸಿದರು. ಒಟ್ಟಿನಲ್ಲಿ ವೈದಿಕ ವೇದಾಂತ ಶಾಸ್ತ್ರದ ಜ್ಞಾನ ಸಂಪ್ರದಾಯ ಹಾಗೂ ಆಳ್ವಾರುಗಳ ಪ್ರಬಂಧಗಳ ಭಕ್ತಿ ಸಂಪ್ರದಾಯ. ಎರಡೂ ಸೇರಿದ ಉಭಯ ವೇದಾಂತ ಸಂಪ್ರದಾಯವು ರಾಮಾನುಜ ಸಿದ್ಧಾಂತ

ಮನೆಗೆ ಕರೆದುಕೊಂಡು ಹೋದಾಗ ಗೌರವ ಸಿಗದಿದ್ದರೂ, ಸಮಾಧಾನ ಚಿತ್ತರಾಗಿದ್ದ ಶಿಷ್ಯನನ್ನು ನೋಡಿದ ನಾಥಮುನಿಗಳು ಅವರನ್ನು ಉಯ್ಯಕ್ಕೊಂಡಾರ್ ಎಂದು ಕರೆದರು.

ನಾಥಮುನಿಗಳು ಆಗಾಗ ಸಮಾಧಿಸ್ಥರಾಗಿ ಬಿಡುತ್ತಿದ್ದುದರಿಂದ, ತಮ್ಮ ಮೊಮ್ಮಗನ ಜವಾಬ್ದಾರಿಯನ್ನು ನೋಡಿಕೊಳ್ಳುವಂತೆ ಪುಂಡರೀಕಾಕ್ಷರನ್ನು ಒಪ್ಪಿಸಿದ್ದರು. ಆದರೆ ತಮಗೆ ವಯಸ್ಸಾದುದರಿಂದ, ಗುರುಗಳ ಆಜ್ಞೆಯನ್ನು ಕಾರ್ಯಗತ ಮಾಡಲು ತಮ್ಮ ಶಿಷ್ಯ ರಾಮಮಿಶ್ರರಿಗೆ ಯಾಮುನರನ್ನು ಒಪ್ಪಿಸಿ, ವಿಶಿಷ್ಟಾದ್ವೈತವನ್ನು ಅಭಿವೃದ್ಧಿ ಪಡಿಸುವಂತೆ ಹೇಳಿದರು.

ರಾಮಮಿಶ್ರ(ಮಣಕ್ಕಾಲ್‌ನಂಬಿ), ತಿರುವಲ್ಲಿಕ್ಕೇಣಿಪಾಣ್‌ಪೆರುಮಾಳ್ ಅರೈಯರ್ ಶೆಟ್ಟಿಲೂರ್ ಶೆಂಡಲಂಗಾರದಾಸರ್, ಪುಂಡರೀಕಾಕ್ಷದಾಸರ್, ಉಲಹಪ್ಪೆರುಮಾಳನಂಗೈ ಎಂಬುವರು ಪುಂಡರೀಕಾಕ್ಷರ ಮುಖ್ಯ ಶಿಷ್ಯರು.

ಪುಂಡರೀಕಾಕ್ಷರ ಮುಖ್ಯ ಶಿಷ್ಯರೂ, ಯಾಮುನರ ಆಧ್ಯಾತ್ಮಿಕ ಗುರುವೂ ಆದ ಮೊದಲನೆಯ ರಾಮಮಿಶ್ರರು, ಶ್ರೇಷ್ಠ ವಿದ್ವಾಂಸರು ಹಾಗೂ ವ್ಯಾಕರಣ ಪಂಡಿತರು ಆಗಿದ್ದರು. ಯಾಮುನರಿಗೆ ಸರಿಯಾದ ಸಂಸ್ಕೃತ ಶಿಕ್ಷಣವನ್ನು ಕೊಟ್ಟು, ವೇದಾಧ್ಯಯನ ಮಾಡಿಸಿ, ಭಗವದ್ಗೀತೆಯ ಸಾರವೆನಿಸಿದ ಶರಣಾಗತಿಯ ರಹಸ್ಯವನ್ನು ಉಪದೇಶಿಸಿ, ಅವರು ಪ್ರಖ್ಯಾತರಾಗುವಂತೆ, ಸಿದ್ಧಾಂತವನ್ನು ರಕ್ಷಿಸಿ, ಪ್ರಚಾರ ಮಾಡುವಂತೆ ಮಾಡಿದರು. ರಾಜಭೋಗದಲ್ಲಿ ನಿರತರಾಗಿದ್ದ ಯಾಮುನರ ಮನಸ್ಸನ್ನು ಬಹಳ ಶ್ರಮಪಟ್ಟು ಆಧ್ಯಾತ್ಮಿಕದ ಕಡೆಗೆ ಬದಲಾಯಿಸಿದವರು ರಾಮಮಿಶ್ರರು.

ಆಳವಂದಾರ್ (ಯಾಮುನ), ದೈವತ್ತುಕ್ಕರಶುನಂಬಿ, ಶಿರಪ್ಪುಳ್ಳು ರಾವೃದ್ಧೈಯಪಿಳ್ಳೈ, ಗೋಮಠತ್ತು ತಿರುವಣ್ಣಹರಪ್ಪನ್ ವಂಗಿಪ್ಪುರತ್ತಆಚ್ಚಿ, ಶೊಟ್ಟೆನಂಬಿ, ಪಿಳ್ಳೈಯರಶುನಂಬಿ, ತಿರುವರಂಗಪ್ಪೆರುಮಾಳ್, ತಿರುಮಾಲಿರುಂಶೋಲೈದಾಸರ್, ಅರಶುನಂಬಿ–ಇವರು ರಾಮಮಿಶ್ರರ ಶಿಷ್ಯರು.

ಪುಂಡರೀಕಾಕ್ಷ, ರಾಮಮಿಶ್ರ ಇಬ್ಬರೂ ಯಾವುದೇ ಗ್ರಂಥಗಳನ್ನು ರಚಿಸದಿದ್ದರೂ, ಶ್ರೀ ವೈಷ್ಣವ ಸಂಪ್ರದಾಯದ ತತ್ತ್ವಗಳನ್ನು ಕಲೆಹಾಕಿ, ದರ್ಶನ, ರಹಸ್ಯಾರ್ಥ ಮತ್ತು ದಿವ್ಯಪ್ರಬಂಧಗಳನ್ನು ಜನರಿಗೆ ತಿಳಿಸಲು, ಗೋಷ್ಠಿಗಳನ್ನು ಏರ್ಪಡಿಸಿ, ಜನರ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದರು. ಶ್ರೀವೈಷ್ಣವರೆನಿಸಿಕೊಂಡವರೆಲ್ಲರೂ, ಸರ್ವಸೃಷ್ಟಿಕರ್ತನೂ, ಸರ್ವಲೋಕ ಶರಣ್ಯನೂ ಆದ ಶ್ರೀಮನ್ನಾರಾಯಣನನ್ನು ಮಾತ್ರ ಪೂಜಿಸಬೇಕೆಂದೂ, ಐಹಿಕ ಆಸೆ ಸುಖಗಳ ಪೂರ್ತಿಗಾಗಿ ಇತರ ಸಣ್ಣ ಪುಟ್ಟ ದೇವ ದೇವತೆಗಳ ಪೂಜೆ, ಅತಿಯಾದ ವ್ರತ, ಉಪವಾಸ, ಹಬ್ಬಗಳನ್ನು ಮಾಡಬಾರದೆಂದೂ ಪ್ರಚಾರ ಮಾಡಿದರು.

ಆ ಕಾಲದ ಸನ್ನಿವೇಶದಲ್ಲಿ ಧಾರ್ಮಿಕ ಶಿಕ್ಷಣಕ್ಕೆ ಅವಕಾಶವಿಲ್ಲದಿದ್ದ, ದಸ್ಯು, ಶೂದ್ರ ಮುಂತಾದ ಕೆಳ ಜಾತಿಯವರೆಂದು ಕರೆಸಿಕೊಳ್ಳುತ್ತಿದ್ದವರನ್ನೂ ತಮ್ಮ ಪಂಥಕ್ಕೆ ಸೇರಿಸಿಕೊಂಡು, ಪ್ರಬಂಧ ಪಾರಾಯಣ ಮತ್ತು ಪ್ರಪತ್ತಿಗಳ ಮೂಲಕ ಅವರಿಗೂ ಪರಮಾತ್ಮನನ್ನು ಅರಿಯುವ ಹಾಗೂ ಮೋಕ್ಷವನ್ನು ಪಡೆಯುವ, ಅವಕಾಶ ಅನುಕೂಲಗಳನ್ನು ಕಲ್ಪಿಸಿಕೊಟ್ಟರು. ತಮಿಳು ವೇದ ವೆನಿಸಿದ ಆಳ್ವಾರುಗಳ ದಿವ್ಯಪ್ರಬಂಧವನ್ನು ಬ್ರಾಹ್ಮಣರಲ್ಲದವರೂ ಹೇಳ ಬಹುದಾಗಿದ್ದಿತು; ಪ್ರಪತ್ತಿಗೆ ಪಾಂಡಿತ್ಯ, ಜಾತಿಗಳ ನಿರ್ಬಂಧವಿರಲಿಲ್ಲ. ಈ ಎರಡು ಕಾರಣಗಳಿಂದ ಸನಾತನ ಧರ್ಮದ ಶ್ರೀವೈಷ್ಣವ ಪಂಥವು ಬಹು ಬೇಗ ಹರಡಿ ಜನರ ಮನಸ್ಸಿನ ಮೇಲೆ ಪ್ರಭಾವ ಬೀರಿ, ಸಾವಿರಾರು ಶಿಷ್ಯರನ್ನು ತನ್ನೊಳಗೆ ಸೇರಿಸಿಕೊಂಡಿತು.

## ಅಧ್ಯಾಯ ೪ — ಯಾಮುನಾಚಾರ್ಯ
## (916-1042)

ಆಷಾಢೇಚೋತ್ತರಾಷಾಢಾ ಸಂಭೂತಂ ತತ್ರವೈಪುರೇ ।
ಸಿಂಹಾಸನಾಂಶಂ ವಿಖ್ಯಾತಂ ಶ್ರೀಯಾಮುನ ಮುನಿಂ ಭಜೇ ॥೧॥

ಸಿಂಹಾಸನಾಶಭವಮಿಾಶ್ವರಯೋಗಿಸಿಂಧು
ಮುಕ್ತಾಮಣಿಂ ಮಹಿತ ನಾಥಮುನೀಂದ್ರ ಪೌತ್ರಂ।
ಪ್ರಜ್ಞಾವಿಶೇಷ ಜಲಧಿಂ ಪ್ರತಿಪಾದತೂಲ
ಜಂಘಾನಿಲಂ ಹೃದಯ ಚಿಂತಯ ಯಾಮುನಾರ್ಯ ॥೨॥

ಶ್ರೀ ರಾಮಮಿಶ್ರ ಸಚ್ಛಿಷ್ಯಂ ವಂದೇ ತತ್ತ್ವಾರ್ಥ ಕೋವಿದಂ ।
ವಾದಾದವಾಪ್ತ ರಾಜ್ಯಾದ್ಯೋ ವಿರಕ್ತೋ ಯಾಮುನೋ ಭವೇತ್ ॥೩॥

ಯತ್ಪದಾಂಭೋರುಹಧ್ಯಾನವಿಧ್ವಸ್ತಾಶೇಷ ಕಲ್ಮಷಃ ।
ವಸ್ತುತಾಮುಪಯಾತೋಽಹಂ ಯಾಮುನೇಯಂ ನಮಾಮಿ ತಂ ॥೪॥

ನಾಥಮುನಿಗಳ ಮಗ ಈಶ್ವರ ಮುನಿಯು ತಮ್ಮ ತಂದೆ, ತಾಯಿ ಮತ್ತು ಧರ್ಮಪತ್ನಿಯೊಂದಿಗೆ ಶ್ರೀಕೃಷ್ಣನ ಜನ್ಮಸ್ಥಾನವಾದ ಮಥುರೆ, ಬೃಂದಾವನಗಳಿಗೆ ಯಾತ್ರೆ ಹೋದಾಗ, ಶ್ರೀಕೃಷ್ಣನ ವರಪ್ರಸಾದದಿಂದ ಅವರಿಗೆ ಹುಟ್ಟಿದವರೇ ಯಾಮುನರು. ವೀರನಾರಾಯಣಪುರದಲ್ಲಿದ್ದ ಇವರು ಬಹು ಬುದ್ಧಿವಂತರೂ, ಶ್ರೇಷ್ಠವಾದ ಜ್ಞಾಪಕ ಶಕ್ತಿಯುಳ್ಳವರೂ ಆಗಿದ್ದರು. ವಿದ್ಯಾಭ್ಯಾಸ ಮಾಡುವಾಗಲೇ ಶಾಲೆಯಲ್ಲಿ ಹಿರಿಯ ಮಣೆಯ ಸ್ಥಾನವನ್ನು ಗೆದ್ದುಕೊಂಡರು.

ಇವರಿಗೆ ಹನ್ನೆರಡು ವರ್ಷವಾಗಿದ್ದಾಗ, ಚೋಳರಾಜನ ಆಸ್ಥಾನದ ಮಹಾವಿದ್ವಾಂಸನಾದ ಅಕ್ಕಿ ಆಳ್ವಾನ್ ಎಂಬುವನ ಶಿಷ್ಯರು, ಇವರ ಗುರುಗಳಾದ ಮಹಾಭಾಷ್ಯಭಟ್ಟರಿಂದ ವಾರ್ಷಿಕ ಕಪ್ಪವನ್ನು ವಸೂಲು ಮಾಡಲು ಬಂದರು. ಗುರುಗಳಿಲ್ಲದುದರಿಂದ, ಯಾಮುನರೇ ಕಪ್ಪವನ್ನು ಕೊಡುವುದಿಲ್ಲವೆಂದು ಹೇಳಿ, ಅಕ್ಕಿ ಆಳ್ವಾನ್‌ಗೆ ಈ ಪದ್ಯವನ್ನು ಬರೆದು ಕಳುಹಿಸಿದರು.

ನವಯಂ ಕವಯಸ್ತು ಕೇವಲಂ ನವಯಂ ಕೇವಲ ತಂತ್ರಪಾರಗಾಃ ।
ಅಪಿತು ಪ್ರತಿವಾದಿ ವಾರಣ ಪ್ರಕಟಾಟೋಪ ವಿಪಾಟನಕ್ಷಮಾಃ ॥

ಆವೇಳೆ ಇವರು ರಾಜನ ಆಹ್ವಾನವನ್ನು ಅಂಗೀಕರಿಸಿ, ತಮ್ಮ ಪಾಂಡಿತ್ಯ ಪ್ರಕಾಶನದಿಂದ ಹಾಗೂ ವಾದ ಶಕ್ತಿಯಿಂದ ರಾಜ ರಾಣಿಯರ ಎದುರಿನಲ್ಲಿಯೇ ಶಾಸ್ತ್ರಾರ್ಥದಲ್ಲಿ ಆಕ್ಕಿ ಆಳ್ವಾನನನ್ನು ಸೋಲಿಸಿ ತಮ್ಮ ಗುರುಗಳು ಕೊಡುತ್ತಿದ್ದ ಕಪ್ಪವನ್ನು ನಿಲ್ಲಿಸಿದರು. ಮೊದಲೇ ಆಗಿದ್ದ ಒಪ್ಪಂದದಂತೆ ಯಾಮುನರು ಹೇಳಿದ "ರಾಜನು ಸಾರ್ವಭೌಮ, ರಾಜಪತ್ನಿಯು ಪತಿವ್ರತೆ ನನ್ನ ತಾಯಿ ಬಂಜೆಯಲ್ಲ" ಎಂಬುದನ್ನು ಇಲ್ಲವೆಂದು ಸಮರ್ಥಿಸಲಾರದೆ, ಆಕ್ಕಿ ಆಳ್ವಾನನು ಸೋಲನ್ನು ಒಪ್ಪಿಕೊಂಡನು.

ಸಂಸ್ಕೃತ ವಿದ್ವತ್ತು, ಸಾಹಿತ್ಯ, ಕವಿತ್ವಗಳಲ್ಲಿ ಯಾಮುನರಂಥವರು ಸಿಗುವುದು ಬಹು ದುರ್ಲಭ ನಾಯಕತ್ವಕ್ಕಾಗಿಯೇ ಹುಟ್ಟಿ ಬಂದ ಅವರು, ರಾಣಿಯಿಂದ ಆಳವಂದಾರ್ (ಆಳಲು ಬಂದವರು) ಎಂಬ ಬಿರುದನ್ನೂ, ರಾಜನಿಂದ ಅರ್ಧ ರಾಜ್ಯವನ್ನೂ, ಪಡೆದು ಆಡಳಿತ ನಡೆಸುತ್ತ ರಾಜಧಾನಿಯಲ್ಲಿ ಭೋಗ ಜೀವನ ನಡೆಸಿದರು. ಆದರೆ ರಾಮಮಿಶ್ರರ ಸತತ ಪ್ರಯತ್ನ-ಪ್ರಭಾವಗಳಿಂದ, ಎಲ್ಲವನ್ನೂ ದಾನ ಮಾಡಿ, ತಮ್ಮ ಎಂಭತ್ತನೆಯ ವಯಸ್ಸಿನಲ್ಲಿ ಶ್ರೀರಂಗಕ್ಕೆ ಬಂದು ಸಂನ್ಯಾಸಿಯಾಗಿ, ಆಧ್ಯಾತ್ಮಿಕ ಜೀವನವನ್ನು ಅಪ್ಪಿದರು, ಗುರುಗಳ ಆಜ್ಞೆಯಂತೆ ಕಾಲಕ್ಷೇಪ ಗೋಷ್ಠಿಯನ್ನು ನಿರ್ವಹಿಸಿಕೊಂಡು, ವಿಶಿಷ್ಟಾದ್ವೈತ ದರ್ಶನದ ಪ್ರಚಾರದಲ್ಲಿ ನಿರತರಾಗಿ, ಗ್ರಂಥ ನಿರ್ಮಾಣವನ್ನೂ ಕೈಗೊಂಡರು.

ಶ್ರೀರಂಗದ ಶ್ರೀವೈಷ್ಣವ ಆಚಾರ್ಯ ಪೀಠದ ಮುಖ್ಯಸ್ಥರಾಗಿ, ಶ್ರೀರಂಗನಾಥ ದೇವಾಲಯದ ಅಧಿಪತಿಯಾಗಿ, ಜ್ಞಾನ ಭಕ್ತಿ ವೈರಾಗ್ಯ ಶಿರೋಮಣಿಯಾಗಿದ್ದ ಯಾಮುನರು, ಚತುಶ್ಶ್ಲೋಕೀ, ಸ್ತೋತ್ರರತ್ನ, ಗೀತಾರ್ಥ ಸಂಗ್ರಹ, ಆಗಮ ಪ್ರಾಮಾಣ್ಯ, ಸಿದ್ಧಿತ್ರಯ, ಕಾಶ್ಮೀರಾಗಮ ಸಂಪ್ರದಾಯ, ಮಹಾಪುರುಷ ನಿರ್ಣಯ ಎಂಬ ಏಳು ಶ್ರೇಷ್ಠ ಕೃತಿಗಳ ಶ್ರೀವೈಷ್ಣವ ಧರ್ಮಸಾಹಿತ್ಯವನ್ನು ರಚಿಸಿ, ಆ ಮೂಲಕ ಖಿಲವಾಗಿದ್ದ ವಿಶಿಷ್ಟಾದ್ವೈತ ತತ್ತ್ವ ಹಾಗೂ ಶ್ರೀವೈಷ್ಣವ ಸಂಪ್ರದಾಯಗಳಿಗೆ ನವಚೇತನವನು ನೀಡಿ, ಅದನ್ನು ಅತಿ ಉತ್ಸಾಹದಿಂದ ಪ್ರಚಾರ ಮಾಡಿದರು. ಜೊತೆಗೆ

ಇದರ ವಿರುದ್ಧ ನಿಂತಿದ್ದ ಜನಪ್ರಿಯವಾದ ಅದ್ವೈತ, ಪೂರ್ವಮೀಮಾಂಸ, ಬೌದ್ಧ, ಚಾರ್ವಾಕ ಮುಂತಾದ ಮತಗಳೊಡನೆ ಹೋರಾಡಿ ಗೆದ್ದರು.

ಚತುಶ್ಲೋಕೀ ಎಂಬ ಸುಂದರವಾದ ಸ್ತೋತ್ರದಲ್ಲಿ ಮಹಾಲಕ್ಷ್ಮಿಯನ್ನೂ, ಸ್ತೋತ್ರರತ್ನದಲ್ಲಿ ಶ್ರೀಮನ್ನಾರಾಯಣನನ್ನೂ ಸ್ತುತಿಸಿ, ಇವೆರಡರ ಮೂಲಕ ಯಾಮುನರು ಪ್ರಪತ್ತಿತತ್ತ್ವದ ಅನುಷ್ಠಾನವನ್ನು ತೋರಿಸಿಕೊಟ್ಟಿದ್ದಾರೆ ನಾರಾಯಣನಿಂದಲೇ ಉಪದೇಶಿಸಲ್ಪಟ್ಟ ಪಾಂಚರಾತ್ರ ಆಗಮವು ವೇದದಷ್ಟೇ ಪ್ರಾಮುಖ್ಯವನ್ನು ಹೊಂದಿದೆ ಎಂಬುದನ್ನು ಆಗಮ ಪ್ರಾಮಾಣ್ಯ ಮತ್ತು ಕಾಶ್ಮೀರಾಗಮ ಸಂಪ್ರದಾಯಗಳಲ್ಲಿ ವಿವರಿಸಿ ಹೇಳಿದ್ದಾರೆ ಜೀವನು ಬ್ರಹ್ಮಕ್ಕಿಂತ ಬೇರೆ ಎಂಬುದನ್ನು ಸಿದ್ಧಿತ್ರಯದಲ್ಲಿ ಸಾಧಿಸಿದ್ದಾರೆ ಉಪನಿಷತ್ತುಗಳು ಮತ್ತು ಪುರಾಣಗಳಲ್ಲಿ ಹೇಳಿರುವ ದೇವರು ನಾರಾಯಣನೇ ಎಂದು ಮಹಾಪುರುಷ ನಿರ್ಣಯದಲ್ಲಿ ತೋರಿಸಿದ್ದಾರೆ. ಕರ್ಮ. ಜ್ಞಾನ, ಭಕ್ತಿಗಳಿಂದ ಹೊಂದಲ್ಪಡತಕ್ಕ ನಾರಾಯಣನೇ ಪರಬ್ರಹ್ಮ ಎಂಬುದೇ ಗೀತಾಶಾಸ್ತ್ರದ ಸಂಕ್ಷೇಪಾರ್ಥವೆಂದು ಗೀತಾರ್ಥ ಸಂಗ್ರಹದಲ್ಲಿ ತಿಳಿಸಿದ್ದಾರೆ. ಯಾಮುನರ ಈ ಕೃತಿಗಳಲ್ಲಿ ಕಂಡುಬರುವ ಶರೀರಿ–ಶರೀರ ಅಥವಾ ಶೇಷಿ–ಶೇಷ ಭಾವವು ರಾಮಾನುಜರಿಂದ ಹೆಚ್ಚು ಶಕ್ತಿ ಪಡೆದು ಹರಡಿತು. ಉಪನಿಷತ್ತು ಮತ್ತು ದಿವ್ಯ ಪ್ರಬಂಧಗಳಲ್ಲಿರುವ ತತ್ತ್ವ ಒಂದೇ ಎಂಬ ಯಾಮುನರ ಭಾವನೆಯನ್ನು ರಾಮಾನುಜರು ತಮ್ಮ ಶ್ರೀಭಾಷ್ಯದಲ್ಲಿ ಸಮರ್ಥಿಸಿದ್ದಾರೆ.

ತಾತ ನಾಥಮುನಿಗಳು ಹಾಕಿದ್ದ ತಳಹದಿಯ ಮೇಲೆ ಮೊಮ್ಮಗ ಯಾಮುನರು ಭವ್ಯವಾದ ಮಂದಿರವನ್ನು ನಿರ್ಮಿಸಿದರು. ದಾರ್ಶನಿಕ ಕ್ರಮ ಮತ್ತು ಕವಿತಾಶಕ್ತಿಗಳ ಮಿಲನ ಆಗಬೇಕೆಂದು ತೋರಿಸಿದ ಇವರ ಮಾರ್ಗವು, ವೇದಾಂತ ದೇಶಿಕರಿಗೆ ಸ್ಫೂರ್ತಿ, ಮಾರ್ಗದರ್ಶನಗಳನ್ನು ನೀಡಿತು. ನಾಥಮುನಿಗಳ ಕೃತಿಗಳು ಪೂರ್ಣವಾಗಿ ಸಿಗದಿರುವುದರಿಂದ, ಯಾಮುನರೇ ವಿಶಿಷ್ಟಾದ್ವೈತ ತತ್ತ್ವ ಮತ್ತು ಶ್ರೀ ವೈಷ್ಣವ ಮತಗಳನ್ನು ಪ್ರಚಾರ ಮಾಡಿದ ಪ್ರಾಚೀನ ಶ್ರೀ ವೈಷ್ಣವಾಚಾರ್ಯರೆನ್ನಬಹುದು. ಯಾಮುನರ 'ಶ್ರೀ' ತತ್ತ್ವವು, ವೈಷ್ಣವ ಮತವನ್ನು ಶ್ರೀವೈಷ್ಣವ ಮತವಾಗಿಸಿ ಅದಕ್ಕೆ ಹೊಸ ಕಳೆಯನ್ನು ನೀಡಿತು.

ಯಾಮುನರ ನೇತೃತ್ವದಲ್ಲಿ ಶ್ರೀರಂಗದ ದೇವಾಲಯದಲ್ಲಿ ನಡೆಯುತ್ತಿದ್ದ ಪೂಜೆ, ಸೇವೆ, ಉಪದೇಶ, ಪ್ರವಚನ ಚರ್ಚೆ, ಇವುಗಳಿಂದ, ಶ್ರೀರಂಗವು ಶ್ರೀ ವೈಷ್ಣವ ಮತದ ಪ್ರಬಲ ಕೇಂದ್ರವಾಯಿತು. ಇದರ ಜೊತೆಗೆ ಕಂಚಿ, ತಿರುಪತಿಗಳೂ ಮುಖ್ಯ ಕೇಂದ್ರಗಳಾದುವು. ಈ ಸ್ಥಳಗಳಲ್ಲಿ ಉಪನಿಷತ್ತುಗಳು ಬ್ರಹ್ಮ ಸೂತ್ರಗಳು, ಭಗವದ್ಗೀತೆ ಎಂಬ ಪ್ರಸ್ಥಾನತ್ರಯವನ್ನೊಳಗೊಂಡ ಸಂಸ್ಕೃತಾಭ್ಯಾಸಕ್ಕೆ ಅವಕಾಶ, ಅನುಕೂಲಗಳು ದೊರೆತು, ಅವುಗಳಿಗೆ ಬಾಯಿ ಮೂಲಕ ಭಾಷ್ಯ ರಚನೆಗಳು ಆರಂಭವಾದುವು. ನಮ್ಮಾಳ್ವಾರರ ತಿರುವಾಯ್ಮೊಳಿಯ ವಿಮರ್ಶಾತ್ಮಕ ಅಧ್ಯಯನವೂ ಆರಂಭವಾಯಿತು. ಇದೇ ಮುಂದೆ ವಡಗಲೆ, ತೆಂಗಲೆ ಎಂಬೆರಡು ಸಂಪ್ರದಾಯಗಳ ಹುಟ್ಟಿಗೆ ಕಾರಣವಾಗಿ, ಶ್ರೀ ವೈಷ್ಣವ ಮತವನ್ನು ಎರಡಾಗಿ ಒಡೆಯಿತು.

ಮುಂದೆ ತಮ್ಮ ಸ್ಥಳವನ್ನು ಭರ್ತಿ ಮಾಡಲು ತಮ್ಮ ಕಿರಿಯ ಸಮಕಾಲೀನರೂ, ಜ್ಞಾನಶೀಲಗಳ ಗಣಿಯೂ, ಆದ ರಾಮಾನುಜರೇ ಸಮರ್ಥರೆಂದು ತಿಳಿದಿದ್ದರೂ, ಅವರು ಅದ್ವೈತದ ಆಚಾರ್ಯರಾದ ಯಾದವ ಪ್ರಕಾಶರಲ್ಲಿ ಶಾಸ್ತ್ರಾಭ್ಯಾಸ ಮಾಡುತ್ತಿದ್ದುದರಿಂದ, ಯಾಮುನ–ರಾಮಾನುಜರ ಭೇಟಿ, ಯಾಮುನರ ಜೀವಿತ ಕಾಲದಲ್ಲಿ ಆಗಲೇ ಇಲ್ಲ. ಆದರೂ ಕಂಚಿಗೆ ಹೋಗಿ, ರಾಮಾನುಜರನ್ನು ಕಟಾಕ್ಷಿಸಿದಾಗ, ತಮ್ಮ ಮನಸ್ಸಿನಲ್ಲಿ ಅವ್ಯಕ್ತವಾಗಿ ಅಡಗಿದ್ದ, ಹೊರಬರಲು ತವಕಿಸುತ್ತಿದ್ದ, ಆದರೆ ಮಾತುಗಳಲ್ಲಿ ಸರಿಯಾಗಿ ಮೂಡದಿದ್ದ, ಭಾವನೆಗಳೆಲ್ಲಾ ಸ್ಪಷ್ಟವಾದ ರೂಪನ್ನು ಪಡೆದು, ರಾಮಾನುಜರಲ್ಲಿ ಪ್ರಕಾಶಿಸುತ್ತಿವೆ; ಭಕ್ತಿ, ಪ್ರಪತ್ತಿ ಪ್ರಧಾನವಾದ ಭಾಗವತ ಸಂಪ್ರದಾಯಕ್ಕೆ ವೇದ ಶಾಸ್ತ್ರಗಳ ಅಡಿಪಾಯ ಹಾಕಿ, ಶ್ರೀ ವೈಷ್ಣವ ಸಿದ್ಧಾಂತವನ್ನು ನಿರೂಪಿಸುವ ಶಕ್ತಿ ರಾಮಾನುಜರಲ್ಲಿ ಅಡಗಿದೆ; ಎಂಬುದು ಯಾಮುನರಿಗೆ ಸ್ಪಷ್ಟವಾಗಿ ಗೋಚರಿಸಿತು. ಶ್ರೀವೈಷ್ಣವ ಸಿದ್ಧಾಂತ ದರ್ಶನದ ನಿರ್ವಹಣೆಗೆ ಸಮರ್ಥರೆಂದು ತೋರಿದ ರಾಮಾನುಜರನ್ನು ತಮ್ಮ ಪಂಥಕ್ಕೆ ದೊರಕಿಸಿಕೊಡುವಂತೆ ಯಾಮುನರು ಕಂಚಿಯ ವರದರಾಜಸ್ವಾಮಿಯನ್ನು ಶರಣುಹೋಗಿ, ಈ ಶ್ಲೋಕಗಳಿಂದ ಪ್ರಾರ್ಥಿಸಿ ಶ್ರೀರಂಗಕ್ಕೆ ಹಿಂತಿರುಗಿದರು.

ಯಸ್ಯ ಪ್ರಸಾದಕಲಯಾ ಬಧಿರಃ ಶೃಣೋತಿ
ಪಂಗುಃ ಪ್ರಧಾವತಿ ಜವೇನ ಚ ಶಕ್ತಿಮೂಕಃ ।
ಅಂಧಃ ಪ್ರಪಶ್ಯತಿ ಸುತಂ ಲಭತೇ ಚ ವಂಧ್ಯಾ
ತಂ ದೇವದೇವ ವರದಂ ಶರಣಂ ಗತೋಽಸ್ಮಿ ॥೧॥

ಲಕ್ಷ್ಮೀಶ ಪುಂಡರೀಕಾಕ್ಷ ಕೃಪಾ ರಾಮಾನುಜೇ ತವ ।।
ವಿಘಾಯ ಸ್ವಮತೇ ನಾಥ ಪ್ರವಿಷ್ಟಂ ಕರ್ತುಮರ್ಹಸಿ ॥೨॥

ರಾಮಾನುಜರು ಯಾದವ ಪ್ರಕಾಶರನ್ನು ತ್ಯಜಿಸಿದರೆಂದು ಸುದ್ದಿ ತಿಳಿದಾಗ, ಇದನ್ನೇ ಆಶಿಸುತ್ತಿದ್ದ ಯಾಮುನರಿಗೆ ಉಂಟಾದ ಸಂತೋಷದಲ್ಲಿ, ಅವರು ಶ್ರೀರಂಗದ ರಂಗನಾಥಸ್ವಾಮಿಯನ್ನು ಕುರಿತು ಹಾಡಿದ ಪದ್ಯಗಳೇ, ಶ್ರೀ ವೈಷ್ಣವ ಮತದ ಮೂಲತತ್ತ್ವದ ಪ್ರಕಾಶಿಕೆ ಎನಿಸಿದ ಸ್ತೋತ್ರರತ್ನ ಎನಿಸಿತು. ಇಷ್ಟಾದರೂ ತಮ್ಮ ಹಿರಿಯಾಸೆಯು ನೆರವೇರುವುದೋ, ಇಲ್ಲವೋ ಎಂಬ ಚಿಂತೆಯಿಂದಲೇ ಯಾಮುನರು ಮರಣಹೊಂದಿದರು. ಯಾಮುನರನ್ನು ನೋಡಬೇಕೆಂಬ ಉತ್ಕಟೇಚ್ಛೆಯಿಂದ, ಅವರು ಕರೆತರಲು ಕಳುಹಿಸಿದ್ದ ಮಹಾಪೂರ್ಣರೊಂದಿಗೆ ಓಡೋಡಿ ಬಂದ ರಾಮಾನುಜರಿಗೆ, ಅವರ ಮೃತ ದೇಹದ ದರ್ಶನ ಭಾಗ್ಯ ಮಾತ್ರ ಲಭಿಸಿತು.

ಬ್ರಹ್ಮಸೂತ್ರ, ಭಗವದ್ಗೀತೆ, ವಿಷ್ಣುಸಹಸ್ರನಾಮ, ತಿರುವಾಯ್ಮೊಳಿ ಇವುಗಳಿಗೆ ವಿಶಿಷ್ಟಾದ್ವೈತದ ದೃಷ್ಟಿಯಿಂದ ಭಾಷ್ಯವನ್ನು ಬರೆಸಬೇಕು; ವಿಷ್ಣುಪುರಾಣದ ಕರ್ತೃವಾದ ಪರಾಶರ ಮತ್ತು ದಿವ್ಯಪ್ರಬಂಧಗಳ ಕರ್ತೃವಾದ ಶಠಗೋಪ ಇವರಿಬ್ಬರ ಕೀರ್ತಿಯು ಶಾಶ್ವತವಾಗಿರುವಂತೆ ಮಾಡಬೇಕು– ಎಂಬ ಯಾಮುನರ ಅಂತಿಮ ಇಚ್ಛೆಯನ್ನು ಪೂರೈಸುವೆನೆಂದು, ಅವರ ಮೃತದೇಹದ ಮುಂದೆ ರಾಮಾನುಜರು ಈ ರೀತಿ ಪ್ರತಿಜ್ಞೆ ಮಾಡಿದರು. "ಇವು ನಿಮ್ಮ ಸಂಕಲ್ಪಗಳಾಗಿದ್ದರೆ, ನಾನು ಆರೋಗ್ಯವಾಗಿದ್ದರೆ, ನಿಮ್ಮ ಅನುಗ್ರಹ ನನ್ನ ಮೇಲಿದ್ದರೆ, ದೇವರು ನನ್ನ ಪ್ರಾರ್ಥನೆಯನ್ನು ಮನ್ನಿಸಿದರೆ, ನಿಮ್ಮ ಆಸೆಯನ್ನು ನಾನು ಖಂಡಿತವಾಗಿಯೂ ಪೂರೈಸುತ್ತೇನೆ", ಎಂಬುದಾಗಿ

ರಾಮಾನುಜರು ಮಾತು ಕೊಟ್ಟಾಗ, ಯಾಮುನರ ಮಡಿಸಿದ್ದ ಕೈಬೆರಳುಗಳು ಬಿಚ್ಚಿಕೊಂಡವೆಂದು ಪ್ರತೀತಿ

ಪೆರಿಯನಂಬಿ, ತಿರುಕ್ಕೋಟ್ಟಿಯೂರ್‌ನಂಬಿ, ತಿರುಮಲೈಯಾಂಡಾನ್, ಪೆರಿಯತಿರುಮಲೈನಂಬಿ, ಆಳವಂದಾರಾಳ್ವಾನ್, ತಿರುಕ್ಕಚ್ಚಿನಂಬಿ, ವಾನಮಾಮಲೈಯಾಂಡಾನ್, ಈಶಾಂಡಾನ್, ದೈವವಾರಿಯಾಂಡಾನ್, ಶಿರಿಯಾಂಡಾನ್, ತಿರುಮೋಕೂರಪ್ಪನ್, ತಿರುಮೋಕೂರ್‌ನಿನ್ರಾರ್, ದೈವಪ್ಪೆರುಮಾಳ್, ತಿರುಮಂಗೈಯಾಳಿಯಾರ್, ಪಿಳ್ಳೈತಿರುಮಾಲಿರುಂಶೋಲೈದಾಸರ್, ಮಾರನೇರ್‌ನಂಬಿ, ಆಳ್ಕೊಂಡಿಯಮ್ಮಂಗಿ, ಈಂಗಚ್ಚೋಳಾಂಡಾನ್. ರಾಜಪತ್ನಿ ತಿರುವರಂಗತ್ತಮ್ಮ– ಇವರು ಯಾಮುನರ ಮುಖ್ಯ ಶಿಷ್ಯರು. ಯಾಮುನರ ಶಿಷ್ಯರಲ್ಲಿ ಐದು ಜನರು ರಾಮಾನುಜಗೆ ಉಪದೇಶಿಸಿ. ಪಂಚಾಚಾರ್ಯರೆಂದು ಪ್ರಸಿದ್ಧಿ ಪಡೆದುದರಿಂದ ಯಾಮುನರು ರಾಮಾನುಜರ ಗುರುಗಳ ಗುರುಗಳಾದರು.

"ಜಗತ್ತಿನಲ್ಲಿ ಕಳ್ಳರು ಕದಿಯಬಹುದಾದ, ಅನರ್ಥಗಳಿಗೆ ಕಾರಣವಾದ, ಇದ್ದರೂ–ಹೋದರೂ ಭಯ–ದುಃಖಗಳನ್ನುಂಟು ಮಾಡುವ, ತನ್ನವರನ್ನೂ ಶತ್ರುವಾಗಿಸುವ ಹಾಗೂ ದೂರ ಮಾಡುವ, ನಶ್ವರವಾದ, ಹಣವನ್ನು ಆಶಿಸುವವರೆಲ್ಲ ಅಜ್ಞಾನಿಗಳು. ಜೀವನದಲ್ಲಿ ನಮ್ಮನ್ನು ಸದಾ ರಕ್ಷಿಸುವ, ಪರಲೋಕವನ್ನು ತಂದುಕೊಡುವ, ಸುಖ ಆನಂದಗಳನ್ನು ನೀಡುವ, ಭಗವಂತನನ್ನೂ ವಶಪಡಿಸಿಕೊಳ್ಳಬಲ್ಲ, ಶರಣಾಗತಿ ಎಂಬ ಸಂಪತ್ತನ್ನು ಆಶಿಸುವವರೆಲ್ಲ ಜ್ಞಾನಿಗಳು.

"ಪ್ರಪನ್ನನಾದವನು ಭಗವಂತನ ಅಧೀನವಾದ ಆತ್ಮಯಾತ್ರೆ, ಕರ್ಮದ ಅಧೀನವಾದ ಶರೀರ ಯಾತ್ರೆ, ಇವೆರಡೂ ತನಗೆ ಅನ್ವಯಿಸುವುದಿಲ್ಲವೆಂದು ಭಾವಿಸಬೇಕು. ಭಗವಂತ, ಆಚಾರ್ಯ, ಭಾಗವತ ಈ ಮೂರೂ ಆರಾಧನೆಗೆ ಯೋಗ್ಯವಾದ ವಸ್ತುಗಳು, ಭಗವಂತನಾದ ಲಕ್ಷ್ಮೀನಾರಾಯಣನೇ ನಮಗೆ ಒಡೆಯ, ಸ್ವಾಮಿ; ನಾವೆಲ್ಲ ಅವನ ಭೃತ್ಯರು, ಅಧೀನ ವಸ್ತುಗಳು, ಆತ್ಮ

ರಕ್ಷಣೆಯ ಬಗ್ಗೆ ಭಗವಂತನಲ್ಲಿ ಸಂಪೂರ್ಣ ಭರವಸೆ ಇಟ್ಟು. ಆತನ ಮಹಾ ಸಂಕಲ್ಪವನ್ನು ಸಾಧಿಸುವ ಸಲುವಾಗಿ, ನಾವೆಲ್ಲ ಕೇವಲ ಯಂತ್ರಗಳು ಎಂದು ತಿಳಿದು, ಅವನ ಪ್ರೇರಣೆಯಂತೆ ನಡೆಯಬೇಕು.

"ಭಗವಂತನ ಪ್ರತ್ಯಕ್ಷ ಮೂರ್ತಿಯಾದ ಭಕ್ತನನ್ನು, ಜಾತಿಮತ ಮುಂತಾದ ಭೇದವೆಣಿಸದೆ ಸೇವಿಸುವುದೆಂದರೆ, ವಾಂಗ್ಮನಸ್ಸುಗಳಿಗೆ ಅತೀತ ನಾದ ಭಗವಂತನನ್ನೇ ಸೇವಿಸಿದಂತೆ. ಭಗವಂತನ ಅವತಾರಗಳನ್ನು ಹಾಗೂ ಅವನ ಪ್ರತಿಮೆ, ವಿಗ್ರಹ, ಸಾಲಿಗ್ರಾಮ ಶಿಲೆಗಳನ್ನು ಶ್ರದ್ಧಾ ಭಕ್ತಿಗಳಿಂದ, ನಮ್ರತೆ–ವಿನಯಗಳಿಂದ ಪೂಜಿಸಬೇಕು. ತೀರ್ಥ ಪ್ರಸಾದವನ್ನು ಸ್ವೀಕರಿಸುವ ಸಮಯದಲ್ಲಿ ಅರ್ಥಕಾಮ ಪರವಶರಾಗಿರಬಾರದು.

"ಗುರು ಪರಂಪರೆಯ ಅನುಸಂಧಾನ ಪೂರ್ವಕವಾಗಿಯೇ ಮಂತ್ರಗಳನ್ನು ಅನುಸಂಧಾನ ಮಾಡಬೇಕು. ಶ್ರೀರಂಗವೇ ಮೂಲ ಮಂತ್ರಾರ್ಥ, ಕಂಚಿಯೇ ದ್ವಯ ಮಂತ್ರಾರ್ಥ, ತಿರುಮಲೆಯೇ ಶರಣಾಗತಿ ಮಂತ್ರಾರ್ಥ, ಎಂದು ತಿಳಿದು ಪ್ರಪತ್ತಿ ಮಾಡಿ ಭಗವಂತನನ್ನು ಸೇವಿಸಬೇಕು.

"ದುಃಖ, ನೋವುಗಳಿಗೆ ಕಾರಣವಾದ, ನಾನು ನನ್ನದು ಎಂಬ ಅಹಂಕಾರ–ಮಮಕಾರಗಳನ್ನು ಬಿಟ್ಟು, ನಾವು ಭಗವಂತನ ಸೇವಕರು ಎಂಬ ಭಾವನೆಯನ್ನು ಬೆಳೆಸಿಕೊಂಡು ದೃಢಗೊಳಿಸಿ ನಡೆದರೆ, ನಿಷ್ಕಾಮ ಪ್ರೇಮ ವನ್ನು ಹೊಂದಿದ್ದರೆ, ಹುಟ್ಟು–ಸಾವುಗಳನ್ನು ಗೆದ್ದು, ಶ್ರೀಮನ್ನಾರಾಯಣನ ಸಾನ್ನಿಧ್ಯದಲ್ಲಿ ಆನಂದವಾಗಿರಬಹುದು." ಇದು ಯಾಮುನರ ಚರಮ ಸಂದೇಶ.

ಯಾಮುನರಿಗೆ ಸೊಟ್ಟೆ ನಂಬಿ, ತೈವಿಟ್ಟುಕ್ಕರಸುನಂಬಿ, ಪಿಳ್ಳೈ ಅರಸು ನಂಬಿ, ತಿರುವರಂಗಪ್ಪೆರುಮಾಳ್ ಅರೈಯರ್ ಎಂಬ ನಾಲ್ಕು ಮಕ್ಕಳಿದ್ದರು. ಎರಡನೆಯ ಮಗನಾದ ತೈವಿಟ್ಟುಕ್ಕರಸುನಂಬಿ ಅಥವಾ ದೇವಾಧಿರಾಜನಿಗೆ ತಿರುಮಲೈನಂಬಿ ಅಥವಾ ಶ್ರೀಶೈಲಪೂರ್ಣ ಎಂಬ ಮಗನೂ, ಕಾಂತಿಮತಿ (ಭೂಮಿಪ್ಪಿರಾಟ್ಟಿ) ಮತ್ತು ದ್ಯುತಿಮತಿ (ಪೆರಿಯಪ್ಪಿರಾಟ್ಟಿ) ಎಂಬ ಹೆಣ್ಣು

ಮಕ್ಕಳೂ ಇದ್ದರು ಕಾಂತಿಮತಿಯು ಶ್ರೀಪೆರಂಬೂದೂರಿನ ಆಸೂರಿ ಕೇಶವಾಚಾರ್ಯರನ್ನು ವಿವಾಹವಾಗಿ ರಾಮಾನುಜರನ್ನು ಪಡೆದಳು; ದ್ಯುತಿಮತಿಯು ಕಮಲನಯನ ಭಟ್ಟರನ್ನು ಮದುವೆಯಾಗಿ ಗೋವಿಂದನನ್ನು ಪಡೆದಳು. ಇನ್ನೊಬ್ಬ ಮಗ ತಿರುವರಂಗಪ್ಪೆರುಮಾಳ್ ಅರೈಯರ್ (ವರರಂಗ) ತಿರುವಾಯ್ಮೊಳಿಯನ್ನು ಸಂಗೀತಕ್ಕೆ ಅಳವಡಿಸಿದರು. ಹೀಗೆ ಯಾಮುನರ ಜೊತೆಗೆ ಅವರ ಮಕ್ಕಳು ಹಾಗೂ ಮೊಮ್ಮಗಳ ಮಕ್ಕಳಿಂದ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ವಿಶೇಷ ಕೊಡುಗೆ, ಸೇವೆಗಳು ದೊರಕಿವೆ.

ಯಾಮುನಾಚಾರ್ಯರ ನಂತರ ಸ್ವಲ್ಪ ಕಾಲ ಅವರ ಮುಖ್ಯ ಶಿಷ್ಯರಾದ ಪೆರಿಯನಂಬಿ (ಪರಾಂಕುಶದಾಸ, ಮಹಾಪೂರ್ಣ) ಗಳು ದರ್ಶನ ನಿರ್ವಾಹಕರಾಗಿದ್ದರು. ಇವರಿಗೆ ಎಂಬೆರುಮಾನಾರ್, ತಿರುಕ್ಕಚ್ಚಿನಂಬಿ, ಮಲೈಕುನಿಯನಿನ್ರಾರ್, ಆರ್ಯ ಶ್ರೀಶಠಗೋಪದಾಸರ್, ಅಣಿಯರಂಗತ್ತಮುದನಾರ್, ತಿರುವಾಯ್ ಕುಲಮುಡೈಯಾನ್‌ಭಟ್ಟರ್, ಮುಖ್ಯ ಶಿಷ್ಯರು.

ಯಾಮುನರು ಹಿಂದೆಯೇ ಕಂಚಿಯ ವರದರಾಜಸ್ವಾಮಿಯ ದೇವಾಲಯದಲ್ಲಿ ಕಟಾಕ್ಷಿಸಿ, ಅಭಿಮಾನ ಹೊಂದಿದ್ದ ರಾಮಾನುಜರನ್ನೇ ಮುಂದೆ ದರ್ಶನ ನಿರ್ವಾಹಕ್ಕಾಗಿ ಕರೆತರಲು ಪೆರಿಯ ನಂಬಿಗಳು ಪ್ರಯತ್ನಿಸಬೇಕೆಂದು, ಶ್ರೀರಂಗದ ಶ್ರೀವೈಷ್ಣವ ಮಂಡಲಿಯು ಪ್ರಾರ್ಥಿಸಿತು. ಅದರಂತೆ ಪೆರಿಯ ನಂಬಿಗಳು ಕಂಚಿಗೆ ಹೋಗುವ ದಾರಿಯಲ್ಲಿ ಮಧುರಾಂತಕ ಎಂಬ ಊರಿನ ಏರಿಕಾತ್ತ ಪೆರುಮಾಳ್ ಎಂಬ ಶ್ರೀರಾಮಚಂದ್ರ ದೇವಾಲಯದಲ್ಲಿ ತಂಗಿದ್ದರು. ಅತ್ತ ಪೆರಿಯ ನಂಬಿಗಳನ್ನು ಆಶ್ರಯಿಸಬೇಕೆಂಬ ವರದರಾಜ ಸ್ವಾಮಿಯ ಸಂದೇಶವನ್ನು ತಿರುಕ್ಕಚ್ಚಿನಂಬಿಗಳ ಮೂಲಕ ಅರಿತ ರಾಮಾನುಜರೂ, ಕಂಚಿಯಿಂದ ಹೊರಟು ಶ್ರೀರಂಗಕ್ಕೆ ಹೋಗುವ ದಾರಿಯಲ್ಲಿ ಮಧುರಾಂತಕದಲ್ಲಿ ತಂಗಿದ್ದ ಪೆರಿಯ ನಂಬಿಗಳನ್ನು ಅನಿರೀಕ್ಷಿತವಾಗಿ ಕಂಡರು ಆಗ ರಾಮಾನುಜರ ಇಷ್ಟದಂತೆ ಪೆರಿಯ ನಂಬಿಗಳು ಅಲ್ಲಿಯೇ ಅವರಿಗೆ ಪಂಚ ಸಂಸ್ಕಾರಗಳನ್ನು ಅನುಗ್ರಹಿಸಿದರು. ದ್ವಯಮೇ ಪ್ರಮಾಣ, ದ್ವಯಾರ್ಥ ಪ್ರಕಾಶ

ಭೂತನಾಗಿ ಬಿಜಯು ಮಾಡಿರುವ ಶಂಖ ಚಕ್ರಧಾರಿಯಾದ ಲಕ್ಷ್ಮೀನಾರಾಯಣನೇ ಪ್ರಮೇಯ. ಸರ್ವಶಕ್ತ, ಪೂರ್ಣಜ್ಞಾನಿ, ಕರುಣಾಮಯ ಆದ ಭಗವಂತನು ನಮ್ಮ ಸ್ವಾಮಿ. ಅವನ ಪವಿತ್ರವಾದ ಕೈಂಕರ್ಯವೇ ಜೀವನದ ಗುರಿ. ರಾಮಾನುಜರೇ ಪ್ರಮಾತಾ–ಎಂಬ ವಿವರಗಳನ್ನೆಲ್ಲ ಸಾಂಗೋಪಾಂಗವಾಗಿ ಉಪದೇಶಿಸಿದರು. ಆಮೇಲೆ ಅವರಿಟ್ಟಯಂತೆ ಕಂಚಿಗೂ ಬಂದು ರಾಮಾನು ಜರ ಮನೆಯಲ್ಲಿ ಕೆಲಕಾಲ ಇದ್ದು, ಅವರಿಗೆ ವ್ಯಾಸಸೂತ್ರ, ನ್ಯಾಸತತ್ತ್ವ, ಗೀತಾರ್ಥ ಸಂಗ್ರಹ, ಸಿದ್ಧಿತ್ರಯ, ಪಾಂಚರಾತ್ರಾಗಮ ಎಂಬೀ ದರ್ಶನ ಹಾಗೂ ದಿವ್ಯ ಪ್ರಬಂಧಗಳ ರಹಸ್ಯವನ್ನು ತಿಳಿಸಿಕೊಟ್ಟರು.

ರಾಮಾನುಜರನ್ನು ಚೋಳರಾಜನ ಬಾಧೆಯಿಂದ ಕಾಪಾಡುವ ಸಲು ವಾಗಿ, ಪೆರಿಯನಂಬಿಗಳು, ಕೂರೇಶರೊಡನೆ ರಾಜಾಸ್ಥಾನಕ್ಕೆ ಹೋಗಿ, ಅಲ್ಲಿ ಶಿವಪಾರಮ್ಯದ ಶೈಥಿಲ್ಯವನ್ನೂ, ನಾರಾಯಣ ಪಾರಮ್ಯದ ಶಕ್ತಿಯನ್ನೂ ಸಮರ್ಥಿಸಿ, ಕಣ್ಣುಗಳನ್ನು ಕಳೆದುಕೊಂಡು, ಆ ಬಾಧೆಯಿಂದ ಪರಮ ಪದ ವನ್ನೈದಿದರು. ಹೀಗೆ ಶಿಷ್ಯ ರಾಮಾನುಜರನ್ನು ಉಳಿಸುವ ಸಲುವಾಗಿ ಕಷ್ಟ ನಷ್ಟಗಳನ್ನು ಅನುಭವಿಸಿದ ತ್ಯಾಗಿ, ಗುರು ಪೆರಿಯನಂಬಿಗಳು.

ಪೆರಿಯನಂಬಿಗಳೇ ರಾಮಾನುಜರ ಮುಖ್ಯ ಆಚಾರ್ಯರೆನಿಸಿದರೂ, ಯಾಮುನರ ಮುಖ್ಯ ಶಿಷ್ಯರಾದ ಪೆರಿಯ ತಿರುಮಲೆನಂಬಿ, (ಶ್ರೀಶೈಲಪೂರ್ಣ, ತಾತಾಚಾರ್ಯ),ತಿರುಮಲೈಯಾಂಡಾನ್(ಮಾಲಾಧರ),ತಿರುಕ್ಕೋಟ್ಟಿಯೂರ್ ನಂಬಿ (ಗೋಷ್ಠೀಪೂರ್ಣ), ಆಳವಂದಾರಾಳ್ವಾನ್ (ತಿರುವರಂಗಪ್ಪೆರುಮಾಳ್ ಅರೆಯರ್, ವರರಂಗಗಾಯಕ) –ಎಂಬುವರೂ ಉಪದೇಶಿಸಿ, ರಾಮಾನುಜರ ಪಂಚಾಚಾರ್ಯರೆಂದು ಪ್ರಸಿದ್ಧಿಹೊಂದಿದ್ದಾರೆ.

# ಅಧ್ಯಾಯ ೪ — ರಾಮಾನುಜಾಚಾರ್ಯ
# (1017-1137)

ಚೈತ್ರಾರ್ದ್ರಾ ಸಂಭವಂ ವಿಷ್ಣೋರ್ದರ್ಶನ ಸ್ಥಾಪನೋತ್ಸುಕಂ ॥
ತುಂಡೀರ ಮಂಡಲೇ ಶೇಷ ಮೂರ್ತಿಂ ರಾಮಾನುಜಂ ಭಜೇ ॥೧॥

ಯೋನಿತ್ಯಮಚ್ಯುತಪದಾಂಬುಜ ಯುಗ್ಮರುಕ್ಮ
ವ್ಯಾಮೋಹತಸ್ತದಿತರಾಣಿ ತೃಣಾಯಮೇನೇ ।
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿಂಧೋಃ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ॥೨॥

ಆಳ್ವಾರುಗಳ ಗೋಷ್ಠಿಯಲ್ಲಿ ನಮ್ಮಾಳ್ವಾರರು ಪ್ರಧಾನರಾಗಿ, ಉಳಿದ ಆಳ್ವಾರುಗಳು ಅವರಿಗೆ ಅಂಗಪ್ರಾಯರಾಗಿರುವಂತೆ, ಆಚಾರ್ಯರ ಗೋಷ್ಠಿಯಲ್ಲಿ ರಾಮಾನುಜರು ಪ್ರಧಾನರಾಗಿ, ಉಳಿದ ಆಚಾರ್ಯರೆಲ್ಲರೂ ಅವರಿಗೆ ಅಂಗಪ್ರಾಯರೆಂದು ಪ್ರಸಿದ್ಧಿಯಾಗಿದೆ. ಅಂದರೆ ಆಳ್ವಾರುಗಳಲ್ಲಿ ಪ್ರಪನ್ನಜನಕೂಟಸ್ಥರೆಂದು ಪ್ರಸಿದ್ಧಿ ಪಡೆದ ನಮ್ಮಾಳ್ವಾರರಂತೆ, ಆಚಾರ್ಯರಲ್ಲಿ ಭಗವಾನ್ ಎನಿಸಿದ ರಾಮಾನುಜರು ಅಸಮಾನರಾಗಿ ಅಮೋಘವಾದ ಸ್ಥಾನವನ್ನು ಗಳಿಸಿದ್ದಾರೆ. ಪೂರ್ವಾಚಾರ್ಯರೆಂಬ ರತ್ನಮಾಲೆಯಲ್ಲಿ ರಾಮಾನುಜರು ನಾಯಕರತ್ನದಂತೆ ಮಧ್ಯಸ್ಥರಾಗಿದ್ದು, ತಮ್ಮ ಪೂರ್ವಾಚಾರ್ಯ ಸಂಬಂಧವನ್ನು ತಮ್ಮ ಉತ್ತಮಾಂಗವಾದ ಶಿರಸ್ಸಿಗೆ ಆಭರಣಪ್ರಾಯವಾಗಿಟ್ಟುಕೊಂಡು, ಅರ್ವಾಚೀನ ಆಚಾರ್ಯ ಸಂಬಂಧವನ್ನು ತಮ್ಮ ಪಾದಾರವಿಂದಗಳೊಂದಿಗೆ ಸೇರಿಸಿಕೊಂಡಿದ್ದಾರೆ– ಅಂದರೆ ತಮ್ಮ ಪೂರ್ವಾಚಾರ್ಯ ಪರಂಪರಾ ಪ್ರಾಪ್ತವಾದ ಅರ್ಥವಿಶೇಷಗಳನ್ನೆಲ್ಲ ಶಿರಸಾವಹಿಸಿ, ಯಥಾವತ್ ಪ್ರತಿಪತ್ತಿಯಿಂದ ಅವೆಲ್ಲವನ್ನೂ ತಮ್ಮ ಪಾದಾರವಿಂದಗಳ ಸಂಬಂಧ ಪಡೆದ ಅರ್ವಾಚೀನ

ಆಚಾರ್ಯರ ಪರಂಪರೆಗೆ ಉಪದೇಶದ ಮೂಲಕ ನೀಡಿ ಉಪಕರಿಸಿ, ಆದರಣೀಯ ಸ್ಥಾನವನ್ನು ಗಳಿಸಿದ್ದಾರೆ. ಇದನ್ನೇ

"ಪತ್ಯುಃ ಸಂಯಮಿನಾಂ ಪ್ರಣಮ್ಯಾ ಚರಣೌ ತತ್ಪಾದ ಕೋಟೀರಯೋಃ ।
ಸಂಬಂಧೇನ ಸಮಿಧ್ಯಮಾನ ವಿಭವಾನ್ ಮಾನ್ಯಾನ್ ತಥಾನ್ಯಾನ್ ಗುರೂನ್॥

ಎಂಬ ಶ್ಲೋಕದಲ್ಲಿ ವೇದಾಂತ ದೇಶಿಕರು ಹೇಳಿದ್ದಾರೆ.

ಪುರಾ ಸೂತ್ರೈರ್ವ್ಯಾಸಃ ಶ್ರುತಿಶತಶಿರೋರ್ಥಃ ಗ್ರಥಿತವಾನ್
ವಿವವ್ರೇತ ಚ್ಛ್ರಾವ್ಯಂ ವಕುಳಧರ ತಾವೇತ್ಯಸ ಪುನಃ ।
ಉಭಾವೇಕಾಗ್ರಸ್ಥಾ ಘಟಯಿತುಮಲಂ ಯುಕ್ತಿಭಿರಸೌ
ಪುನರ್ಜಜ್ಞೇ ರಾಮಾನುಜ ಇತಿ ಸ ಬ್ರಹ್ಮ ಮಾಕುರಃ ॥

ಎಂಬಂತೆ ಶ್ರೀಮನ್ನಾರಾಯಣನೇ ವ್ಯಾಸರಾಗಿ ಅವತರಿಸಿ, ಸಂಸ್ಕೃತ ಭಾಷೆಯಲ್ಲಿ ಶಾರೀರಕ ಮೀಮಾಂಸೆ ಎಂಬ ಬ್ರಹ್ಮಸೂತ್ರಗಳನ್ನು ರಚಿಸಿದನು ; ಆಮೇಲೆ ವ್ಯಾಸರೇ ವಕುಳಾಭರಣ ಅಥವಾ ನಮ್ಮಾಳ್ವಾರರ ರೂಪದಲ್ಲಿ ಬಂದು ಆ ಬ್ರಹ್ಮಸೂತ್ರಗಳನ್ನು ಸುಂದರವಾದ ಸೂಕ್ತಿಗಳಿಂದ ತಮಿಳು ಭಾಷೆಯಲ್ಲಿ ವಿವರಿಸಿದರು ; ಕೊನೆಗೆ ಅವರೇ ರಾಮಾನುಜರಾಗಿಯೂ ಅವತರಿಸಿ, ಸಂಸ್ಕೃತ, ತಮಿಳು ಎರಡೂ ಭಾಷೆಗಳಲ್ಲಿರುವ ಕೃತಿಗಳ ಭಾವವನ್ನು ಸುವಿಶದವಾಗಿ ಪ್ರಕಾಶಪಡಿಸಿ, ಈ ಲೋಕವನ್ನು ಚೆನ್ನಾಗಿ ಬಾಳಿಸಿದರು.

ಅನಂತಂ ಪ್ರಥಮಂ ರೂಪಂ ಲಕ್ಷ್ಮಣಶ್ಚ ತತಃ ಪರಂ ।
ಬಲಭದ್ರ ತೃತೀಯಸ್ತು ಕಲೌಕಶ್ಚಿದ್ಭವಿಷ್ಯತಿ ॥೧॥

ಹರಿಣಾಜ್ಞಾಪಿತೋನಂತೋ ಲೋಕ ಸಂರಕ್ಷಣಾಯಸಃ
ಅವತೀರ್ಣಾ ಭವದ್ಭೂಮ್ಯಾಂ ಸರ್ವಲೋಕೈಕ ದೇಶಿಕಃ
ರಾಮಾನುಜಾಭಿದ ಶ್ರೀಮಾನ್ ಭಗವಾನ್ ಕರುಣಾರ್ಣವಃ

ತತ್ಸಂಬಂಧಬಲೇ ನೈವ ನಿರಸ್ತಾಖಿಲ ಕಲ್ಮಷಾಃ
ಕಲಾವಪಿ ಧ್ರುವಂ ಮುಕ್ತಿಂ ಗಮಿಷ್ಯಂತ್ಯಖಿಲಾಜನಾಃ ||೨||

ಮೇಲಿನ ಶ್ಲೋಕಗಳು ರಾಮಾನುಜರ ಅವತಾರವನ್ನು ಸೂಚಿಸುವಂಥವು. ಶ್ರೀರಾಮ, ಶ್ರೀಕೃಷ್ಣರಂತೆ, ರಾಮಾನುಜರು ಶಸ್ತ್ರಾಸ್ತ್ರಗಳನ್ನು ಕೊಟ್ಟು ಭಯಪಡಿಸದೆ, ತಮ್ಮ ನಿಶ್ಚಿತ ಜ್ಞಾನ ಹಾಗೂ ಪ್ರೀತಿಗಳ ಬಲದಿಂದ ಜನರನ್ನು ಸನ್ಮಾರ್ಗಕ್ಕೆ ತಂದು ಉದ್ಧರಿಸಿದರು.

ವಿಷ್ಣುರೂಪದ ವೇದವ್ಯಾಸರಿಂದ ಸೂತ್ರ ರೂಪದಲ್ಲಿ ಉಕ್ತವಾಗಿ, ಬೋಧಾಯನ, ಟಂಕ, ದ್ರಮಿಡ, ಗುಹದೇವ, ಕಪರ್ದಿ, ಭಾರುಚಿ. ನಾಥಮುನಿ, ಯಾಮುನಮುನಿ ಮುಂತಾದ ಆಚಾರ್ಯರುಗಳಿಂದ ಸಂಗ್ರಹವಾಗಿ ವಿವೃತವಾದುದನ್ನು, ರಾಮಾನುಜರು ವೇದ, ಉಪನಿಷತ್ತು, ವಿಷ್ಣು ಪುರಾಣ, ಪಾಂಚರಾತ್ರ ಮತ್ತು ವೈಖಾನಸ ಆಗಮ, ರಾಮಾಯಣ, ಮಹಾಭಾರತ, ಭಗವದ್ಗೀತೆ, ದಿವ್ಯ ಪ್ರಬಂಧ ಎಲ್ಲಕ್ಕೂ ಸಮಾನವಾದ ಪ್ರಾಶಸ್ತ್ಯವನ್ನಿತ್ತು, ವೇದೋಕ್ತಿಗಳಲ್ಲಿ ಯಾವುದನ್ನೂ ಅಮುಖ್ಯವೆಂದು ಗಣಿಸದೆ, ಎಲ್ಲವನ್ನೂ ಮುಖ್ಯವೆಂದೇ ಅಂಗೀಕರಿಸಿ, ಅವುಗಳಲ್ಲಿ ಅಲ್ಲಲ್ಲಿ ಕಾಣುವ ಭೇದ–ಅಭೇದ ಅಥವಾ ವಿರೋಧೋಕ್ತಿಗಳಿಗೆ, ಸುಂದರವಾಗಿ ಹೊಂದಿಕೊಳ್ಳುವ ಅರ್ಥವನ್ನೂ, ಸಮಂಜಸವಾದ ವಿವರಣೆಯನ್ನೂ ನೀಡಿ, ಯಾವ ವಿಧವಾದ ಸಂದೇಹ–ಅನುಮಾನಗಳಿಗೂ ಎಡೆಯಿಲ್ಲದಂತೆ ಸಂಗ್ರಹಿಸಿ, ಸಂಸ್ಕರಿಸಿ, ಸ್ಥಿರೀಕರಿಸಿ, ತಾರ್ಕಿಕವಾಗಿ ಸುವ್ಯವಸ್ಥಿತ ರೂಪದಲ್ಲಿ ಪ್ರತಿಪಾದಿಸಿ ಪ್ರಚಾರ ಮಾಡಿದರು. ತಮ್ಮ ಭಕ್ತಿಯುತ, ಗಾಂಭೀರ್ಯ ವಾಕ್ಪ್ರವಾಹದಿಂದ, ಜನರ ಮನಸ್ಸನ್ನು ಕರಗಿಸಿ ಅದು ಸಗುಣಬ್ರಹ್ಮನಾದ ಭಗವಂತನ ಕಡೆಗೆ ಪ್ರವಹಿಸುವಂತೆ ಮಾಡಿದರು.

ವಿಷ್ಣುಭಕ್ತಿಯು ಭಗವದ್ಗೀತೆಯಲ್ಲಿ ಆರಂಭವಾಗಿ, ಆಳ್ವಾರುಗಳ ದಿವ್ಯ ಪ್ರಬಂಧದಲ್ಲಿ ಪ್ರವಹಿಸಿ, ರಾಮಾನುಜ ಸಿದ್ಧಾಂತದಲ್ಲಿ ಸ್ಥಿರವಾದ ಉನ್ನತ

ಸ್ಥಾನವನ್ನು ಗಳಿಸಿತು. ಪ್ರವಾಹಗಳೆಲ್ಲವೂ ಜಲಾಶಯದಲ್ಲಿ ಬಂದು ಐಕ್ಯವಾಗುವಂತೆ, ವೇದಗಳಲ್ಲಿನ ವಿಷ್ಣು-ವಾಸುದೇವ-ನಾರಾಯಣ ಪೂಜೆ, ಭಾಗವತ ಸಂಪ್ರದಾಯ, ರಾಮಕೃಷ್ಣಆದಿ ಅವತಾರ ಕಥೆಗಳು, ವೈಷ್ಣವ ಆಗಮ, ಆಳ್ವಾರುಗಳು, ವಿಶಿಷ್ಟಾದ್ವೈತ ವೇದಾಂತ –ಇವುಗಳಲ್ಲಿ ಕಂಡುಬರುವ ಮೊದಲಿನ ಭಕ್ತಿ ಪ್ರವಾಹಗಳೆಲ್ಲವೂ, ತ್ಯಾಗಜೀವಿಯಾದ ರಾಮಾನುಜರಲ್ಲಿ ಸೇರಿ, ಅಲ್ಲಿಂದ ಮತ್ತೆ ಬೇರೆ ಬೇರೆ ಕವಲುಗಳಾಗಿ ಒಡೆದು ಹರಿದು ಭಕ್ತರನ್ನು ಉದ್ಧರಿಸಿವೆ. ರಾಮಾನುಜರ ಸಗುಣೇಶ್ವರ ಭಾವನೆಯು ಹಾಗೂ ಚಿದಚಿದೀಶ್ವರ ಸಿದ್ಧಾಂತವು ಭಾರತದ ಭಕ್ತಿಪಂಥಕ್ಕೆ ಸ್ಫೂರ್ತಿಯನ್ನು ನೀಡಿ, ಇಲ್ಲಿನ ಕೋಟ್ಯಾನುಕೋಟಿ ಜನರ ಮನಸ್ಸನ್ನು ತಣಿಸಿದೆ ಹಾಗೂ ಅಪಾರ ಸಾಹಿತ್ಯ ನಿರ್ಮಾಣಕ್ಕೆ ಕಾರಣವಾಗಿದೆ.

ಕಾಂಚೀಪುರದ ಬಳಿಯಲ್ಲಿ ಹಾರೀತ ಋಷಿಗೆ ಪ್ರತ್ಯಕ್ಷನಾದ ಆದಿಕೇಶವನ ಸನ್ನಿಧಿ ಇರುವ ಭೂತಪುರಿ ಅಥವಾ ಶ್ರೀ ಪೆರುಂಬೂದೂರ್ ಎಂಬ ದಿವ್ಯ ಕ್ಷೇತ್ರದಲ್ಲಿ, ಸರ್ವಕ್ರತು ಆಸೂರಿ ಕೇಶವಾಚಾರ್ಯ ಮತ್ತು ಕಾಂತಿಮತಿ ಎಂಬ ವೈಷ್ಣವ ಬ್ರಾಹ್ಮಣ ದಂಪತಿಗಳಿಗೆ ಮಗನಾಗಿ ರಾಮಾನುಜರು ಅವತರಿಸಿದರು.

ಪುಣ್ಯಾಂಭೋಜವಿಕಾಸಾಯ ಪಾಪಧ್ವಾಂತಕ್ಷಯಾಯ ಚ ।
ಶ್ರೀಮಾನಾವಿರಭೂತ್ ಭೂಮೌ ರಾಮಾನುಜ ದಿವಾಕರಃ ॥

ಎಂಬಂತೆ ಪಾಪ, ಅಜ್ಞಾನಗಳೆಂಬ ಅಂಧಕಾರವನ್ನು ಓಡಿಸುವ ಆಧ್ಯಾತ್ಮಿಕ ಸೂರ್ಯನಂತೆ, ಕೌಸಲ್ಯೆಗೆ ರಾಮನಂತೆ, ದೇವಕಿಗೆ ಕೃಷ್ಣನಂತೆ, ಕಾಂತಿಮತಿಗೆ ರಾಮಾನುಜರು ಜನಿಸಿದರು. ಅನಂತ, ಲಕ್ಷ್ಮಣ ಬಲರಾಮ ಈ ಮೂರೂ ಅವತಾರಗಳು ಆದನಂತರ ರಾಮಾನುಜರಾಗಿ ಹುಟ್ಟಿದರು.

ರಾಮಾನುಜ ಎಂದರೆ ರಾಮನ ತಮ್ಮ ಎಂದರ್ಥ. "ಲಕ್ಷ್ಮಣೋಲಕ್ಷ್ಮೀ ಸಂಪನ್ನಃ" ಎಂಬಂತೆ ಭಗವಂತನ ಕರುಣೆಯಾದ ಲಕ್ಷ್ಮಿಯ ವರಪ್ರಸಾದದಿಂದ ಆರಿದ್ರಾ ನಕ್ಷತ್ರದಲ್ಲಿ ಜನಿಸಿದ ಮಗುವಿಗೆ, ಲಕ್ಷ್ಮಣ ಅಥವಾ ರಾಮಾನುಜ

ಎಂದು ಹೆಸರಿಟ್ಟು, ಅವರು ಶ್ರೀವೈಷ್ಣವ ಮತೋದ್ಧಾರಕನಾದ ಪ ವಾದಿ ಎಂದು ಅಭಿಪ್ರಾಯ ಪಟ್ಟವರು, ಅವರ ಸೋದರ ಮಾವ ಶ್ರೀಶೈಲಪೂರ್ಣರು. ಇದಕ್ಕೆ ಅನೇಕ ಕಾರಣಗಳುಂಟು :-

1) ಶ್ರೀರಾಮನ ತಮ್ಮ ಲಕ್ಷ್ಮಣನಂತೆ ಭಗವಂತನ ಕೈಂಕರ್ಯನಿಷ್ಠೆಯಲ್ಲಿ ಶ್ರೇಷ್ಠರಾಗುತ್ತಾರೆ.

2) ಬಲರಾಮನ ತಮ್ಮ ಶ್ರೀಕೃಷ್ಣನು ವಸುದೇವನ ಪತ್ನಿ ದೇವಕಿಯು ಎಂಟನೆಯ ಗರ್ಭದಲ್ಲಿ ಅವತರಿಸಿ, ಕಂಸನೇ ಮೊದಲಾದ ದುಷ್ಟ ಜನರನ್ನು ನಿಗ್ರಹಿಸಿದನು ; ಅದೇ ರೀತಿಯಲ್ಲಿ ವಿಷ್ವಕ್ಸೇನ, ಶಠಗೋಪ, ನಾಥಮುನಿ, ಪುಂಡರೀಕಾಕ್ಷ, ರಾಮಮಿಶ್ರ, ಯಾಮುನ, ಪೆರಿಯನಂಬಿ ಎಂಬ ಏಳು ಆಚಾರ್ಯರ ನಂತರ ಎಂಟನೆಯವರಾಗಿ ರಾಮಾನುಜರು ಅವತರಿಸಿ, ವಿಶಿಷ್ಟಾದ್ವೈತ ವೇದಾಂತದ ವಿರೋಧಿಗಳನ್ನು ನಿಗ್ರಹಿಸಿ ಜಯಗಳಿಸಿದರು ; ಶ್ರೀಕೃಷ್ಣನು ಮಥುರೆಯಲ್ಲಿ ಹುಟ್ಟಿ, ಗೋಕುಲದಲ್ಲಿ ಬೆಳೆದು, ದ್ವಾರಕೆಯಲ್ಲಿ ನೆಲಸಿದಂತೆ, ರಾಮಾನುಜರು ಶ್ರೀ ಪೆರುಂಬೂದೂರಿನಲ್ಲಿ ಹುಟ್ಟಿ, ಕಂಚಿಯಲ್ಲಿ ಬೆಳೆದು, ಶ್ರೀರಂಗದಲ್ಲಿ ನೆಲಸಿದರು ; ಶ್ರೀಕೃಷ್ಣನು ಯಮುಳಾರ್ಜುನರ ಮಧ್ಯೆ ಹೋಗಿ ಅವರಿಗೆ ಶಾಪ ವಿಮೋಚನೆ ಮಾಡಿದಂತೆ, ರಾಮಾನುಜರು ಸುಖದುಃಖ ಅಹಂಕಾರ ಮಮಕಾರ, ಕಾಮಕ್ರೋಧ, ಪುಣ್ಯ ಪಾಪ ಎಂಬೀ ದ್ವಂದ್ವಗಳ ಮಧ್ಯೆ ಸಿಕ್ಕಿ ಹಾಕಿಕೊಂಡಿದ್ದ ಜನತೆಯನ್ನು ಉದ್ಧರಿಸಿದರು ; ಶ್ರೀಕೃಷ್ಣನು ಸಪ್ತ ಲೋಕಗಳಲ್ಲಿಯೂ ಪ್ರಕಾಶಿಸಿದಂತೆ, ರಾಮಾನುಜರು ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ, ಆಗಮ, ಪ್ರಬಂಧ, ಆಚಾರ್ಯ ಸೂಕ್ತಿ ಎಂಬ ಸಪ್ತ ಪ್ರಮಾಣಗಳ ಆಧಾರದ ಮೇಲೆ ನೂತನ ಸಿದ್ಧಾಂತವನ್ನು ಸ್ಥಾಪಿಸಿ ಪ್ರಕಾಶಮಾನರಾಗಿದ್ದಾರೆ ; ಶ್ರೀಕೃಷ್ಣನು ಪಂಚಪಾಂಡವರನ್ನು ರಕ್ಷಿಸಿದಂತೆ, ರಾಮಾನುಜರು ಅರ್ಥ ಪಂಚಕವನ್ನು ರಕ್ಷಿಸಿ ಬೆಳೆಸಿ ಜನರಿಗೆ ಜ್ಞಾನ ದೊರೆಯಲು ಕಾರಣರಾದರು.

3) ಅತಿಶಯ ಗುಣಗಳಿಂದ ಕೂಡಿದ ಮಹಾಲಕ್ಷ್ಮಿಯ ತಮ್ಮ.

4) ಶ್ರೀದೇವಿಯ ಅಂಶಾವತಾರವಾದ ಆಂಡಾಳ್‌ಗೆ ಅಣ್ಣ.

ಹೀಗೆ ರಾಮಾನುಜ ಎಂಬ ಹೆಸರನ್ನು ಇಡಲು ಅನೇಕ ಉದ್ದೇಶ ಗಳಿದ್ದುವು.

ರಾಮಾನುಜರ ಬಾಲ್ಯ ವಿದ್ಯಾಭ್ಯಾಸವು ತಂದೆಯ ಬಳಿಯಲ್ಲಿಯೇ ನಡೆ ಯಿತು. ಲಕ್ಷ್ಮೀನಾರಾಯಣನ ಅನನ್ಯ ಭಕ್ತರಾಗಿದ್ದ ರಾಮಾನುಜರು, ಭಕ್ತಿ ಪ್ರಪತ್ತಿಗಳಿಂದ, ಜೀವಿಗಳಿಗೆ ಪರಮ ಕಲ್ಯಾಣವೂ, ಆನಂದ ರೂಪದ ಮುಕ್ತಿಯೂ ಲಭಿಸುತ್ತದೆಂದು ನಂಬಿದ್ದರು. ಧಾರ್ಮಿಕ, ಸಂತ, ಭಕ್ತ, ದಾರ್ಶನಿಕ ಆದ ಮಹನೀಯರ ಸತ್ಸಂಗದಲ್ಲಿ ಹಾಗೂ ಸತ್ಕಥಾ ಕಾಲಕ್ಷೇಪದಲ್ಲಿ ಅವರ ಮನಸ್ಸು ಸದಾ ಇಷ್ಟ ಪಡುತ್ತಿದ್ದಿತು. ಜಟಿಲ ಸಮಸ್ಯೆ, ಕಠಿಣ ರೀತಿಯ ಅರ್ಥಗರ್ಭಿತ ವಿಷಯ, ಇವುಗಳನ್ನೆಲ್ಲ ಚೆನ್ನಾಗಿ ಗ್ರಹಿಸಿ, ಅವು ಎಲ್ಲರಿಗೂ ತಿಳಿಯುವಂತೆ ವಿವರಿಸುವ ಅದ್ಭುತ ಶಕ್ತಿ ಇವರಿಗಿದ್ದಿತು. ಅವರಲ್ಲಿ ಕಾಣಬರುತ್ತಿದ್ದ ಅಸಾಧಾರಣ ಬುದ್ಧಿ ಶಕ್ತಿ, ಸನ್ಮಾರ್ಗ ಪ್ರವೃತ್ತಿ, ಸದ್ವರ್ತನೆ, ಗುರು ಹಿರಿಯರಲ್ಲಿದ್ದ ಗೌರವಾದರ, ವಿನಯ, ಶೀಲ ಇವೆಲ್ಲವೂ ಇವರು ಭವಿಷ್ಯದಲ್ಲಿ ಶ್ರೇಷ್ಠ ದರ್ಶನಸ್ಥಾಪನಾಚಾರ್ಯರಾಗುವರೆಂಬುದನ್ನು ಸೂಚಿಸು ತ್ತಿತ್ತು.

ಕಂಚಿಯಲ್ಲಿನ ವರದರಾಜ ದೇವಾಲಯದಲ್ಲಿದ್ದು, ಮಂದರಾಶಿನ ಬಳಿ ಇದ್ದ ತಮ್ಮ ಹುಟ್ಟೂರಾದ ಪೂವಿರುಂದವಲ್ಲಿ ಎಂಬಲ್ಲಿಗೆ, ಶ್ರೀಪೆರುಂಬೂ ದೂರ್ ಮೂಲಕ ಹೋಗುತ್ತಿದ್ದ, ಕಾಂಚೀ ಪೂರ್ಣರನ್ನು ಆಗಾಗ ನೋಡುತ್ತಿದ್ದ ರಾಮಾನುಜರಿಗೆ ಅವರ ವಿಷಯದಲ್ಲಿಯೂ, ತೇಜಸ್ವಿ ಬಾಲಕನ ದ ರಾಮಾನು ಜರ ವಿಷಯದಲ್ಲಿ ಅವರಿಗೂ, ಗಾಢವಾದ ಪ್ರೀತಿ ವಿಶ್ವಾಸಗಳು ಬೆಳೆದುವು. ಇಬ್ಬರೂ ಭೇಟಿಯಾದಾಗ ಕೆಲಕಾಲ ಭಗವದ್ವಿಷಯವನ್ನು ಕುರಿತು ಚರ್ಚೆ, ಚಿಂತನೆ ಮಾಡುತ್ತಿದ್ದರು.

ರಾಮಾನುಜರಿಗೆ ಅವರ ಹದಿನಾರನೆಯ ವಯಸ್ಸಿನಲ್ಲಿ, ಶ್ರೇಷ್ಠ ವಂಶ ದಲ್ಲಿ ಜನಿಸಿದ ಅತಿ ಸುಂದರಿಯಾದ ತಂಜಮ್ಮಾಂಬಾಳ್ ಎಂಬ ವಧುವಿನೊಡನೆ

ವಿವಾಹವಾಯಿತು ಅತ್ತೆ ಸೊಸೆಯರಲ್ಲಿ ತುಂಬಾ ವಿಶ್ವಾಸವಿದ್ದಿತು. ಆದರೆ ಕೆಲವೇ ದಿನಗಳಲ್ಲಿ ತಂದೆಯು ಮರಣ ಹೊಂದಿದುದರಿಂದ, ರಾಮಾನುಜರು ತಾಯಿ-ಪತ್ನಿಯೊಡನೆ, ಉನ್ನತ ವಿದ್ಯಾಭ್ಯಾಸ ಮಾಡಲೆಂದು ಕಂಚಿಗೆ ಹೋದರು.

ಕಂಚಿಯ ಬಳಿಯ ತಿರುಪ್ಪುಟ್ಕುಳಿ ಎಂಬಲ್ಲಿ ಯಾದವ ಪ್ರಕಾಶರೆಂಬ ಅದ್ವೈತ ತತ್ತ್ವ ಜ್ಞಾನಿಗಳಿದ್ದರು. ಅವರಲ್ಲಿದ್ದ ಆಳವಾದ ಪಾಂಡಿತ್ಯ, ಶಾಸ್ತ್ರಜ್ಞಾನ, ವೇದಾಂತ ಜ್ಞಾನ, ಕಲಿಸುವ ಚಾತುರ್ಯ – ಇವು ಶಿಷ್ಯರನ್ನು ಆಕರ್ಷಿಸುತ್ತಿದ್ದಿತು. ಅವರಲ್ಲಿ ರಾಮಾನುಜರು, ತಮ್ಮ ಚಿಕ್ಕಮ್ಮನ ಮಗ ಗೋವಿಂದನೊಡನೆ ವ್ಯಾಸಂಗ ಮಾಡತೊಡಗಿದರು. ಪ್ರತಿಭಾ ಶಾಲಿಯಾಗಿದ್ದ ರಾಮಾನುಜರು ಬಹು ಬೇಗ ಗುರುಗಳ ಅಚ್ಚು ಮೆಚ್ಚಿನ ಶಿಷ್ಯರಾದರು.

ಶಾಸ್ತ್ರ ವ್ಯಾಸಂಗದಲ್ಲಿ ಬಹು ಬೇಗ ಉನ್ನತಿ ಪಡೆಯುತ್ತಿದ್ದ ಹಾಗೂ ಗುರುಗಳೊಂದಿಗೆ ಆಗಾಗ ವಿರೋಧಾಭಿಪ್ರಾಯ ಸೂಚಿಸುತ್ತಿದ್ದ ರಾಮಾನುಜ ರನ್ನು ನೋಡಬೋಸುಗ, ಯಾಮುನರು ಶ್ರೀರಂಗದಿಂದ ಕಂಚಿಗೆ ಬಂದು, ವರದರಾಜಸ್ವಾಮಿಯ ಸನ್ನಿಧಿಯಲ್ಲಿ ಗುರುಗಳೊಂದಿಗೆ ಇದ್ದ ಅವರನ್ನು ನೋಡಿ, ಆಶೀರ್ವದಿಸಿ, ಅವರು ತಮ್ಮ ಪಂಥಕ್ಕೆ ಬರಲೆಂದು ದೇವರನ್ನು ಪ್ರಾರ್ಥಿಸಿ, ಶ್ರೀರಂಗಕ್ಕೆ ಹಿಂದಿರುಗಿದರು.

ಸತ್ಯಂ ಜ್ಞಾನಮನಂತಂ ಬ್ರಹ್ಮ, ಸರ್ವಂ ಖಲ್ವಿದಂ ಬ್ರಹ್ಮ, ತಸ್ಯ ಯಥಾಕಪ್ಯಾಸಂ ಪುಂಡರೀಕಮೇವ ಅಕ್ಷಿಣಿ, ನೇಹನಾನಾಸ್ತಿ ಕಿಂಚನ, ಮುಂತಾದ ಉಪನಿಷತ್ತಿನ ವಾಕ್ಯಗಳಿಗೆ ಯಾದವ ಪ್ರಕಾಶರು ನೀಡುವ ಅರ್ಥ ಅವರ ವಾದಸರಣಿ, ಉಪದೇಶ ಇವು ರಾಮಾನುಜರಿಗೆ ಹಿಡಿಸಲಿಲ್ಲ. ಬಹು ಬೇಗ ಗುರು ಶಿಷ್ಯರಲ್ಲಿ ಭಿನ್ನಾಭಿಪ್ರಾಯ ಉಂಟಾಗಿ, ರಾಮಾನುಜರು ಯಾದವ ಪ್ರಕಾಶರನ್ನು ತ್ಯಜಿಸಿದರು. ಇದನ್ನು ಕೇಳಿದ ಯಾಮುನರಿಗೆ ತುಂಬಾ

ಸಂತೋಷ ಉಂಟಾಗಿ, ಅವರನ್ನು ತಮ್ಮ ಪಂಥಕ್ಕೆ ಸೇರುವಂತೆ ಮಾಡೆಂದು ರಂಗನಾಥ ಸ್ವಾಮಿಯನ್ನು ಪ್ರಾರ್ಥಿಸಿಕೊಂಡರು. ಇಲ್ಲಿ ರಾಮಾನುಜರು ಮುಂದೇನು ಮಾಡಬೇಕೆಂಬ ಚಿಂತೆಯಲ್ಲಿದ್ದಾಗ ತಾಯಿಯ ಸಲಹೆಯಂತೆ ಕಾಂಚೀಪೂರ್ಣ (ತಿರುಕ್ಕಚ್ಚಿನಂಬಿ) ರನ್ನು ಆಶ್ರಯಿಸಿದರು.

ಜನ್ಮತಃ ವೈಶ್ಯರೂ, ಶಾತ್ತಾದ ಶ್ರೀವೈಷ್ಣವರೂ ಆದ ಕಾಂಚೀ ಪೂರ್ಣರು, ಭಗವದ್ಭಕ್ತರೂ, ವಿನಯ ಶೀಲರೂ, ಸರಳ ಸ್ವಭಾವದವರೂ, ಅಪರೋಕ್ಷ ಜ್ಞಾನಿಗಳೂ, ನಿರಹಂಕಾರಿಗಳೂ ಆಗಿದ್ದು, ಅವರ ದರ್ಶನದಿಂದಲೇ ಸಂಕಟ, ಕ್ಲೇಶ, ವಿಪತ್ತುಗಳು ಮಾಯವಾಗಿ ಶಾಂತಿ, ಸಂತೋಷ, ಭಕ್ತಿ ಗಳುಂಟಾಗುತ್ತಿದ್ದುವು. ಕಂಚಿಯ ವರದರಾಜ ಸ್ವಾಮಿಯ ಸೇವೆಯಲ್ಲಿ ನಿರತರಾಗಿದ್ದು, ಅವನ ಅಂತರಂಗ ಭಕ್ತರಾಗಿದ್ದ ಇವರ ಮೂಲಕ ವರದರಾಜ ಸ್ವಾಮಿಯು ತನ್ನ ಇಚ್ಛೆ, ಆಜ್ಞೆಗಳನ್ನು ಭಕ್ತರಿಗೆ ತಿಳಿಸುತ್ತಿದ್ದನು. ವರ್ಣಾ ಶ್ರಮ ವ್ಯವಸ್ಥೆಯನ್ನು ಆಧ್ಯಾತ್ಮಿಕ ರಂಗದಲ್ಲಿ ತಳ್ಳಿ ಹಾಕಬಹುದಾದರೂ, ಸಮಾಜವು ಸಮರಸವಾಗಿ ಉಳಿಯ ಬೇಕಾದರೆ ಅದು ಅವಶ್ಯಕ ಎಂದು ಹೇಳಿ, ಕಾಂಚೀಪೂರ್ಣರು ರಾಮಾನುಜರ ಗುರುಗಳಾಗಲು ಒಪ್ಪಲಿಲ್ಲ. ಆದರೂ ಅವರನ್ನು ಗುರುವೆಂದೇ ಭಾವಿಸಿದ ರಾಮಾನುಜರು, ಅವರ ಸಲಹೆಯಂತೆ ವರದರಾಜ ಸ್ವಾಮಿಗೆ ಶಾಲಕ್ಕಿಣರ್ ಅಥವಾ ಸಾಲವೃಕ್ಷದ ಭಾವಿಯಿಂದ ಅಭಿಷೇಕಕ್ಕೆ ತೀರ್ಥವನ್ನು ತಂದೊಪ್ಪಿಸುವ ಕೈಂಕರ್ಯದಲ್ಲಿ ನಿರತರಾಗಿದ್ದರು. ಜೊತೆಗೆ ಅಧ್ಯಯನ, ತತ್ತ್ವ ಚಿಂತನ, ಮಂಥನಗಳಲ್ಲೂ ನಿರತರಾಗಿದ್ದರು.

ತಮ್ಮ ಭವಿಷ್ಯದ ಬಗ್ಗೆ ತಮ್ಮ ಮನಸ್ಸಿನಲ್ಲಿ ಕಾಡುತ್ತಿದ್ದ ಸಂದೇಹ-ಪ್ರಶ್ನೆಗಳಿಗೆ, ದೇವರಿಂದ ಉತ್ತರವನ್ನು ಪಡೆದು ತಿಳಿಸುವಂತೆ ರಾಮಾನುಜರು ಒಂದು ದಿನ ಕಾಂಚೀಪೂರ್ಣರನ್ನು ಕೇಳಿಕೊಂಡರು.

"ಅಹಮೇವ ಪರಂ ತತ್ತ್ವಂ ಜಗತ್ಕಾರಣಕಾರಣಂ
ಕ್ಷೇತ್ರಜ್ಞೇಶ್ವರಯೋರ್ಭೇದಃ ಸಿದ್ಧ ಏವಮಹಾಮತೇ
ಮೋಕ್ಷೋಪಾಯೋನ್ಯಾಸ ಏವ ಜನಾನಾಂ ಮುಕ್ತಿಮಿಚ್ಛತಾಂ

ಮದ್ಭಕ್ತಾನಾಂ ಜನಾನಾಂ ಚ ನಾಂತಿಮಸ್ಮೃತಿರಿಷ್ಯತೇ
ದೇಹಾವಸಾನೇ ಭಕ್ತಾನಾಂ ದದಾಮಿ ಪರಮಂ ಪದಂ
ಪೂರ್ಣಾಚಾರ್ಯಂ ಮಹಾತ್ಮಾನಂ ಸಮಾಶ್ರಯ ಗುಣಾಶ್ರಯಂ ||

ಇದು ರಾಮಾನುಜರ ಸಂಶಯಗಳಿಗೆ, ದೇವರು ಕಾಂಚೀಪೂರ್ಣರ ಮೂಲಕ ನೀಡಿದ ಸಮಾಧಾನ. ಶ್ರೀಮನ್ನಾರಾಯಣನೇ ಪರತತ್ತ್ವ ಹಾಗೂ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಕರ್ತ. ಜೀವೇಶ್ವರ ಭೇದವು ಸಹಜವಾದುದು. ಜೀವವು ಈಶ್ವರನನು ಅವಲಂಬಿಸಿದೆ. ಮುಕ್ತಿಗೆ ಶರಣಾಗತಿ ಅಥವಾ ಪ್ರಪತ್ತಿಯೇ ಉಪಾಯವು. ಭಕ್ತನಿಗೆ ಅಂತ್ಯ ಸಮಯದಲ್ಲಿ ಸ್ಮರಣೆಯು ಬಲಾತ್ಕಾರವಿಲ್ಲ. ಮರಣದ ನಂತರ ದೇಹದಿಂದ ಬಿಡುಗಡೆಯಾದಾಗ ಮುಕ್ತಿಯನ್ನು ಕೊಡುತ್ತೇನೆ. ಅತಿ ಶ್ರೇಷ್ಠ ಗುಣವುಳ್ಳ ಮಹಾಪೂರ್ಣರನ್ನು ಆಚಾರ್ಯರನ್ನಾಗಿ ಸ್ವೀಕರಿಸಬೇಕು–ಎಂಬುದು ತಿಳಿದುದರಿಂದ, ರಾಮಾನುಜರಿಗೆ ಸಮಾಧಾನ ಉಂಟಾಗಿ ತಮ್ಮ ಮುಂದಿನ ದಾರಿ ಏನೆಂಬುದು ಸುಸ್ಪಷ್ಟವಾಯಿತು.

ಮಧುರಾಂತಕದಲ್ಲಿ ಪೆರಿಯನಂಬಿ (ಮಹಾಪೂರ್ಣ) ರನ್ನು ಭೇಟಿ ಮಾಡಿ, ಅವರಿಂದ ಉಪದೇಶ ಪಡೆದರು. ಆಮೇಲೆ ಯಾಮುನರ ಉಳಿದ ನಾಲ್ವರು ಶಿಷ್ಯರಿಂದಲೂ ಉಪದೇಶ ಪಡೆದು ಪಂಚಾಚಾರ್ಯ ಪದಾಶ್ರಯರೆನಿಸಿ ಪ್ರಖ್ಯಾತರಾದರು. ಆಚಾರ್ಯ ಯಾಮುನರ ಆಜ್ಞೆಯನ್ನು ಪಾಲಿಸಿದ ಈ ಪಂಚಾಚಾರ್ಯರು, ರಾಮಾನುಜರ ಸಂಪರ್ಕ–ಸಂಬಂಧಗಳಿಂದ ತಾವು ಕೃತಾರ್ಥರಾದೆವೆಂದೇ ಭಾವಿಸಿದರು. ಹೀಗೆ ಒಬ್ಬೊಬ್ಬ ಆಚಾರ್ಯರಿಂದಲೂ ವಿಶಿಷ್ಟಾದ್ವೈತದ ಒಂದೊಂದು ರಹಸ್ಯವನ್ನು ಒಂದೊಂದು ರೀತಿಯಲ್ಲಿ ಪಡೆದುಕೊಂಡ ರಾಮಾನುಜರು, ಅದನ್ನೆಲ್ಲಾ ತಮ್ಮ ಅನುಷ್ಠಾನಾದಿಗಳಿಂದ ದೃಢಪಡಿಸಿಕೊಂಡು, ಸಿದ್ಧಾಂತದ ರಕ್ಷಣೆ, ವಿಕಾಸ, ಪ್ರಚಾರಗಳಿಗೆ ಅವಶ್ಯವಾದ ಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸಿಕೊಂಡು, ಆಮೇಲೆ ತಮ್ಮ ಗ್ರಂಥಗಳಲ್ಲಿ ತತ್ತ್ವಹಿತ ಪುರುಷಾರ್ಥಗಳನ್ನು ಹೃದಯಂಗಮವಾಗಿ ನಿರೂಪಿಸಿದ್ದಾರೆ ಈ ಮಹತ್ಕಾರ್ಯದಲ್ಲಿ ರಾಮಾನುಜರಿಗೆ ಅವರ ಆಪ್ತ ಶಿಷ್ಯರೂ, ಪ್ರತಿಭಾವಂತರೂ

ಭಕ್ತಾಗ್ರೇಸರರೂ ಆದ ಕೂರೇಶ (ಕೂರತ್ತಾಳ್ವಾನ್), ದಾಶರಥಿ (ಮುಡಲಿ ಯಾಂಡಾನ್) ಇಬ್ಬರೂ ಮಾಡಿದ ಸೇವೆಯು ಅಸದೃಶವಾದುದು

ಕೂರೇಶ ಅಥವಾ ಶ್ರೀವತ್ಸಾಂಕಮಿಶ್ರರ ಸಹಾಯದಿಂದ ಬೋಧಾಯನ ವೃತ್ತಿಯನ್ನು ಅವಲೋಕಿಸಿ, ವ್ಯಾಸ ವೇದಾಂತ ಸೂತ್ರಗಳಿಗೆ ವಿಶಿಷ್ಟಾದ್ವೈತ ಪರವಾದ ಶ್ರೀಭಾಷ್ಯವನ್ನು ಬರೆದರು; ಕೂರೇಶರ ಮಗನಿಗೆ ಪರಾಶರ ಭಟ್ಟನೆಂದು ಹೆಸರಿಟ್ಟು, ಅವರಿಂದ ವಿಷ್ಣು ಸಹಸ್ರನಾಮಕ್ಕೆ ವ್ಯಾಖ್ಯಾನವನ್ನೂ, ಅಷ್ಟಶ್ಲೋಕೀರಹಸ್ಯ ಜ್ಞಾನ ವೈಭವಗಳ ಸ್ತೋತ್ರಗಳನ್ನೂ ರಚಿಸುವಂತೆ ಮಾಡಿ, ಅವರನ್ನು ತಮ್ಮ ಉತ್ತರಾಧಿಕಾರಿಯಾಗಿ ಮಾಡಿದರು; ಶ್ರೀಶೈಲಪೂರ್ಣರ ಮಗನಿಗೆ ಕುರುಕೇಶನೆಂದು ಹೆಸರಿಟ್ಟು, ಅವರಿಂದ ನಮ್ಮಾಳ್ವಾರರ ತಿರು ವಾಯ್ಮೊಳಿಗ್, ಆರಾಯಿರಪ್ಪಡಿ ಎಂಬ ಮಣಿ ಪ್ರವಾಳ ರೂಪದ ವ್ಯಾಖ್ಯಾನ ವನ್ನು ಬರೆಸಿದರು. ಈ ಕೆಲಸಗಳನ್ನು ಮಾಡುವುದರ ಮೂಲಕ ಯಾಮುನರ ಅಂತಿಮೇಚ್ಛೆಯನ್ನು ಪೂರೈಸಿ, ರಾಮಾನುಜರು ತಮ್ಮ ಪ್ರತಿಜ್ಞೆಯನ್ನು ಉಳಿಸಿಕೊಂಡರು

ಅತ್ಯುತ್ತಮ ಧರ್ಮ ಗ್ರಂಥಗಳನ್ನು ರಚಿಸುವುದರ ಮೂಲಕ ರಾಮಾನು ಜರು ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಅಮೋಘವಾದ ಸೇವೆಯನ್ನು ಸಲ್ಲಿಸಿದ್ದಾರೆ. ಯಾಮುನರ ಕೃತಿಗಳ ಉಪಯೋಗವನ್ನು ಹೆಚ್ಚಾಗಿಯೇ ಮಾಡಿಕೊಂಡು, ಅವರಿಗೆ ಕೃತಜ್ಞರಾಗಿರುವ ರಾಮಾನುಜರಿಂದ, ಯಾಮುನರಿಗೆ ಹೆಚ್ಚಿನ ಭಕ್ತಿ ಗೌರವಗಳು ದೊರಕಿವೆ. ರಾಮಾನುಜರ ಶ್ರೀಭಾಷ್ಯವು ಯಾಮುನರ ಸಿದ್ಧಿ ತ್ರಯದಿಂದ ಸ್ಫೂರ್ತಿ ಪಡೆದಿದೆ; ಜನಪ್ರಿಯವಾಗಿದ್ದ ಅದ್ವೈತಿಗಳ ಸಂವಿ ದಾದ್ವೈತ–ಸದಾದ್ವೈತಗಳಲ್ಲಿನ ಮಾಯೆ, ಮುಕ್ತಿಗಳನ್ನು ಸಿದ್ಧಿತ್ರಯದಲ್ಲಿ ಬರುವ ಶಬ್ದಗಳಿಂದಲೇ ಖಂಡಿಸಿದ್ದಾರೆ; ವಿಷ್ಣುವಿನ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವ ರಾಮಾನುಜರ ವೇದಾರ್ಥ ಸಂಗ್ರಹವು ಯಾಮುನರ ಪುರುಷ ನಿರ್ಣಯವನ್ನು ಅವಲಂಬಿಸಿದೆ; ರಾಮಾನುಜರ ಗೀತಾಭಾಷ್ಯ, ಗದ್ಯತ್ರಯ ಗಳು ಯಾಮುನರ ಗೀತಾರ್ಥ ಸಂಗ್ರಹ, ಆಗಮ ಪ್ರಾಮಾಣ್ಯ, ಸ್ತೋತ್ರ ರತ್ನ, ಚತುಶ್ಲೋಕಿಗಳಿಂದ ಹೆಚ್ಚು ಪ್ರಭಾವಿತವಾಗಿವೆ. ಯಾಮುನರಿಂದ

ಒಪ್ಪಿಗೆ ಪಡೆದ ದೇವಾಲಯಗಳಲ್ಲಿನ ಮೂರ್ತಿ ಪೂಜೆಯೇ ರಾಮಾನುಜರಿಗೆ ಭಕ್ತಿ-ಪ್ರಪತ್ತಿಗಳನ್ನು ಪುನಶ್ಚೇತನಗೊಳಿಸಲು ಅಗಾಧ ನೆರವನ್ನು ನೀಡಿದೆ.

ರಾಮಾನುಜರ ಕೃತಿಗಳು ಏಳು ಅವು ಯಾವುವೆಂದರೆ :

1) ಶ್ರೀವತ್ಸಾಂಕಮಿಶ್ರ ಅಥವಾ ಕೂರೆ ಶರ ಸಹಾಯದಿಂದ, ಬೋಧಾಯನ ವೃತ್ತಿಯನ್ನು ಅವಲೋಕಿಸಿ, ವ್ಯಾಸರ ಬ್ರಹ್ಮ ಸೂತ್ರಗಳಿಗೆ ವಿಶಿಷ್ಟಾದ್ವೈತ ಪರವಾಗಿ ಬರೆದ ವಿಸ್ತಾರವಾದ ಭಾಷ್ಯವೇ ಶ್ರೀಭಾಷ್ಯ. ಇದರಲ್ಲಿ ಸಂಪ್ರದಾಯ ವಿರುದ್ಧವಾದ ನವೀನ ಅರ್ಥ ಕಲ್ಪನೆ ಇರುವುದರ ಬದಲು, ಸಂಪ್ರದಾಯದ ಜಾಡನ್ನೇ ಹಿಡಿದು ಹೊಸ ರೀತಿಯಲ್ಲಿ ಹಳೆಯ ಅರ್ಥವನ್ನು ಸಮಗ್ರವಾಗಿ ಸಮನ್ವಯಗೊಳಿಸಲಾಗಿದೆ. ಪರಬ್ರಹ್ಮ ಎಂದ ರೇನು, ಆತನಿಂದ ಸೃಷ್ಟಿಯಾದ ಜೀವಾತ್ಮನು, ಆ ಪರತತ್ತ್ವವನ್ನು ಹೇಗೆ ಸಾಕ್ಷಾತ್ಕರಿಸಿಕೊಂಡು ಮುಕ್ತಿಯನ್ನು ಪಡೆಯಬಹುದು ಎಂಬುದು ವಿವರಿಸ ಲ್ಪಟ್ಟಿದೆ. ಇದು ಬ್ರಹ್ಮ ವಿಚಾರದ ಶಾಸ್ತ್ರವಾದುದರಿಂದ ಇದಕ್ಕೆ ಬ್ರಹ್ಮ ಮೀಮಾಂಸೆ ಎಂದೂ, ಬ್ರಹ್ಮವು ಜಗತ್ತನ್ನು ಶರೀರವನ್ನಾಗಿ ಹೊಂದಿರು ವುದನ್ನು ಪ್ರತಿಪಾದಿಸುವುದರಿಂದ ಇದಕ್ಕೆ ಶಾರೀರಕ ಮೀಮಾಂಸಾಶಾಸ್ತ್ರ ವೆಂದೂ ಹೆಸರು ಬಂದಿದೆ

ಪರಬ್ರಹ್ಮನು ಸಕಲ ಪ್ರಪಂಚವನ್ನೂ ಸೃಷ್ಟಿಸುವವನು, ಆತನು ಈ ವಿಶ್ವವನ್ನೇ ಶರೀರವಾಗಿ ಹೊಂದಿದ್ದಾನೆ, ಸಕಲ ವಸ್ತುಗಳೂ ಅವನಲ್ಲಿವೆ, ಅವನು ಎಲ್ಲೆಯಿಲ್ಲದಿರುವ ಮಹಿಮೆಯುಳ್ಳವನು, ಜಗತ್ಕಾರಣನಾದ ಅವನು ಯಾರಿಂದಲೂ ಬಾಧಿಸಲ್ಪಡದವನು, ಆತನು ಆಶ್ರಿತರಾದವರಿಗೆ ಆಪ್ತನು, ಪಂಚಭೂತಗಳಿಗೆ ಹಾಗೂ ಜೀವಾತ್ಮನಿಗೆ ಕಾರಣನಾಗಿರುವವನು, ಇಂದ್ರಿಯ ಗಳಿಗೆ ಕಾರಣನಾದವನು, ಈ ಸಂಸಾರವನ್ನು ನಡೆಸಲು ಬೇಕಾದ ಸಂಕಲ್ಪ ವುಳ್ಳವನು, ಚೇತನಾಚೇತನಗಳಲ್ಲೆಲ್ಲ ಅಂತರ್ಯಾಮಿಯಾಗಿದ್ದರೂ ಅವುಗಳ ದೋಷ ಅಂಟದಿರುವವನು, ಹಲವು ವಿಧವಾದ ಧ್ಯಾನ-ಉಪಾಸನೆಗಳಿಗೆ ವಿಷಯ ಲಕ್ಷ್ಯನಾಗಿರುವವನು, ವರ್ಣಾಶ್ರಮ ಧರ್ಮಗಳ ಅನುಷ್ಠಾನದಿಂದ

ಸಂತೋಷಗೊಳ್ಳುವವನು, ಉಪಾಸಿಸುವ ಚೇತನರಲ್ಲಿರುವ ಸರ್ವ ಪಾಪ ಗಳನ್ನೂ ನಾಶ ಮಾಡುವ ದೃಢ ಸಂಕಲ್ಪವುಳ್ಳವನು, ಮೋಕ್ಷ ಮಾರ್ಗಕ್ಕೆ ಮುಖ್ಯವಾದ ಬ್ರಹ್ಮ ನಾಡಿಯಲ್ಲಿ ಜೀವನು ಪ್ರವೇಶಿಸುವಂತೆ ಮಾಡಬಲ್ಲವನು, ಜೀವವನ್ನು ವೈಕುಂಠ ಲೋಕಕ್ಕೆ ಕರೆದುಕೊಂಡು ಹೋಗಿ ಅಲ್ಲಿ ತನ್ನನ್ನು ಅನುಭವಿಸುವಂತೆ ಮಾಡಬಲ್ಲವನು, ಎಂದೂ ಬಿಡಲಾಗದಿರುವ ಶ್ರೀಪಾದ ಉಳ್ಳವನು ಎಂಬುದು ಹದಿನಾರು ಭಾಗಗಳುಳ್ಳ ಶ್ರೀಭಾಷ್ಯದ ವಿಷಯು ವಾಗಿದೆ.

ಅಖಿಲಭುವನ ಜನ್ಮ ಸ್ಥೇಮ ಭಂಗಾದಿಲೀಲೇ
ವಿನತ ವಿವಿಧ ಭೂತವ್ರಾತ ರಕ್ಷೈಕದೀಕ್ಷೇ ।
ಶ್ರುತಿಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ
ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ ॥

ಎಂಬ ಶ್ರೀಭಾಷ್ಯದ ಆರಂಭದ ಮಂಗಳ ಶ್ಲೋಕದಲ್ಲಿಯೇ, ಸಗುಣ ಬ್ರಹ್ಮನ ಪ್ರಾಪ್ತಿಗೆ ಭಕ್ತಿಯೇ ಸಾಧನ ಎಂಬ ಗ್ರಂಥದ ಶಾಸ್ತ್ರಾರ್ಥವೆಲ್ಲಾ ಅಡಗಿದೆ. ವಾತ್ಸ್ಯ ವರದಾಚಾರ್ಯರು ಕಾಲಕ್ಷೇಪದಲ್ಲಿ ಹೇಳಿದ ಇದರ ಪೂರ್ಣ ವಿವರಣೆಯನ್ನು, ಸುದರ್ಶನಾಚಾರ್ಯರ ಶ್ರುತ ಪ್ರಕಾಶಿಕೆ ಎಂಬ ವ್ಯಾಖ್ಯಾನ ರೂಪದ ವಿವರಣ ಗ್ರಂಥದಲ್ಲಿ ಕಾಣಬಹುದು.

2) ಶ್ರೀ ವೈಕುಂಠಗದ್ಯ, ಶ್ರೀರಂಗ ಗದ್ಯ, ಶರಣಾಗತಿ ಗದ್ಯ ಎಂಬ ಗದ್ಯತ್ರಯದಲ್ಲಿ, ವಿಶಿಷ್ಟಾದ್ವೈತದ ತತ್ತ್ವಹಿತ ಪುರುಷಾರ್ಥಗಳನ್ನು ಸ್ಪಷ್ಟ ವಾಗಿ ನಿರೂಪಿಸಲಾಗಿದೆ ಪ್ರಪತ್ತಿ ಅಥವಾ ಶರಣಾಗತಿ ಶಾಸ್ತ್ರಾರ್ಥವನ್ನು ಅನುಷ್ಠಿಸಿ, ಆ ಮೂಲಕ ಅದರ ಸ್ವರೂಪವನ್ನು ಬೋಧಿಸಲಾಗಿದೆ. ಪದ್ಯಕ್ಕಿಂತಲೂ ಮಧುರವಾಗಿರುವ ಈ ಗದ್ಯಗಳು ಶಾಶ್ವತ ಸಾಹಿತ್ಯವೆನಿಸಿದೆ.

3) ರಾಮಾನುಜ ದರ್ಶನವನ್ನು ಸರಿಯಾಗಿ ಗ್ರಹಿಸಲು ರಚಿಸಲ್ಪಟ್ಟಿರುವ ಗ್ರಂಥವೇ ಗೀತಾಭಾಷ್ಯ. ಇದು ಅತ್ಯಂತ ಸಹಜ, ಸಮಂಜಸ,

ಭೋಗ್ಯತಮ, ಹೃದಯಸ್ಪರ್ಶಿ, ನಿಷ್ಠಾಪೂರ್ಣ ಎನಿಸಿದ ಭಗವದ್ಗೀತೆಯ ವ್ಯಾಖ್ಯಾನವಾಗಿದೆ ಎಂಬುದು ಪ್ರಪಂಚದ ಮಹಾಮೇಧಾವಿಗಳ ಅಭಿಪ್ರಾಯ ವಾಗಿದೆ. ಪರಬ್ರಹ್ಮನಾದ ಶ್ರೀಕೃಷ್ಣ ಪರಮಾತ್ಮನಲ್ಲಿ ಭಕ್ತಿ-ಪ್ರಪತ್ತಿಯನ್ನು ಅನುಷ್ಠಿಸುವುದರಿಂದ ಮೋಕ್ಷ ಸಿಗುತ್ತದೆ ಎಂಬ ಗೀತೆಯ ಸಾರಾಂಶವನ್ನು ಇಲ್ಲಿ ಹೃದಯಂಗಮವಾಗಿ ವಿವರಿಸಲಾಗಿದೆ. ಗೀತಾಚಾರ್ಯನಾದ ಶ್ರೀಕೃಷ್ಣನು ತನ್ನ ಶಿಷ್ಯನಾದ ಅರ್ಜುನನಿಗೆ ಯುದ್ಧಭೂಮಿಯಲ್ಲಿ ಉಪದೇಶಿಸಿದ ಸರ್ವೋತ್ಕೃಷ್ಟ ವಾದ ಭಕ್ತಿಶಾಸ್ತ್ರವೆನಿಸಿದ ಭಗವದ್ಗೀತೆಯನ್ನು ಭಾರತೀಯ ತತ್ತ್ವಜ್ಞರ ಹೃದಯ-ಮೆದುಳುಗಳೆರಡರಲ್ಲಿಯೂ ಪುನಃ ಪ್ರತಿಷ್ಠಾಪಿಸಿ, ತತ್ತ್ವ ಹಾಗೂ ಭಗವದನುಭೂತಿಗಳ ಸಮರಸತೆಯನ್ನು ಮತ್ತೆ ಸ್ಥಾಪಿಸಿದ ಕೀರ್ತಿ ರಾಮಾನುಜ ರಿಗೇ ಸಲ್ಲುತ್ತದೆ.

4) ಉಪನಿಷತ್ತುಗಳ ವ್ಯಾಖ್ಯಾನವು ಸಾಕಷ್ಟು ಪ್ರಮಾಣದಲ್ಲಿ ಶ್ರೀಭಾಷ್ಯದಲ್ಲಿಯೇ ಬಂದಿರುವುದರಿಂದ ಅವುಗಳ ಮೇಲೆ ಭಾಷ್ಯವನ್ನು ರಚಿಸದೆ **ವೇದಾರ್ಥ ಸಂಗ್ರಹವನ್ನು** ಮಾತ್ರ ಬರೆದರು. ಇದರಲ್ಲಿ ಪೂರ್ವಪಕ್ಷವನ್ನು ಸಂಗ್ರಹಿಸಿ, ಶಂಕರ, ಭಾಸ್ಕರ ಮತ್ತು ಯಾದವಪ್ರಕಾಶರ ಮತಗಳನ್ನು ನಿರಸನ ಗೊಳಿಸಿ, ಸ್ವಸಿದ್ಧಾಂತವನ್ನು ಸ್ಥಾಪಿಸಲಾಗಿದೆ. ಮೇಲುನೋಟಕ್ಕೆ ಭಿನ್ನಭಿನ್ನ ವಾಗಿ ಕಾಣಬರುವ ವಿವಾದಾತ್ಮಕ ಶ್ರುತಿವಾಕ್ಯಗಳಿಗೆಲ್ಲ, ಸಮಂಜಸ ಹಾಗೂ ನಿಷ್ಕೃಷ್ಟ ಆದ ಅರ್ಥವನ್ನು ಸಪ್ರಮಾಣವಾಗಿ ನೀಡಲಾಗಿದೆ. ವೇದಗಳೆಲ್ಲದರ ಸಾರಾರ್ಥವನ್ನು ಮಥಿಸಿ ನಿರ್ಣಯಿಸಿರುವ ಉತ್ತಮವಾದ ಸಿದ್ಧಾಂತ ಪರವಾದ ಸ್ವತಂತ್ರ ಗ್ರಂಥವಿದು.

5) ವೇದಾಂತಸಾರವು ವಿಶೇಷವಾಗಿ ಶಾಸ್ತ್ರ ಜ್ಞಾನದ ಹಿನ್ನೆಲೆಯುಳ್ಳ ವರಿಗಾಗಿ ರಚಿತವಾದುದು. ಬ್ರಹ್ಮಸೂತ್ರದ ಸಾರಭೂತವಾದ ಅರ್ಥವನ್ನು, ತತ್ತ್ವಗಳ ಸಮಗ್ರ ಸಾರಾಂಶವನ್ನೂ. ಭಾಷ್ಯರೂಪದಲ್ಲಿ ಸಂಕ್ಷೇಪವಾಗಿ ಸರಳ ರೂಪದಲ್ಲಿ ಕೊಡಲಾಗಿದೆ. ಶ್ರೀಭಾಷ್ಯವೆಂಬ ಸೌಧವನ್ನು ಹತ್ತುವ ಪ್ರಥಮ ಸೋಪಾನವಿದು.

6) ವೇದಾಂತ ದೀಪವೆಂಬ ಗ್ರಂಥದಲ್ಲಿ ಶ್ರೀಭಾಷ್ಯವೆಂಬ ಬ್ರಹ್ಮ ಸೂತ್ರದ ವ್ಯಾಖ್ಯಾನವನ್ನೇ ಸಂಗ್ರಹವಾಗಿ, ಸರಳವಾಗಿ ನಿರೂಪಿಸಲಾಗಿದೆ.

7) ನಿತ್ಯಗ್ರಂಥದಲ್ಲಿ ಭಗವದಾರಾಧನ ಕ್ರಮವನ್ನು ಆಗಮಗಳ ಆಧಾರದ ಮೇಲೆ ನಿರೂಪಿಸಲಾಗಿದೆ.

ಗ್ರಂಥ ರಚನೆಯಾದಮೇಲೆ ತಮ್ಮ ಶಿಷ್ಯರೊಡನೆ ಧಾರ್ಮಿಕ ಯಾತ್ರೆ–ಧರ್ಮ ದಿಗ್ವಿಜಯಗಳಿಗಾಗಿ ಹೊರಟರು ಅಹೋಬಲ, ತಿರುಪತಿ, ಮದರಾಸು, ತಿರುಕ್ಕೋಯಿಲೂರ್, ತಿರುವಹೀಂದ್ರಪುರ, ವೀರನಾರಾಯಣಪುರ, ಕಂಚಿ, ಕುಂಭಕೋಣ, ಮಧುರೆ, ತಿರುಕ್ಕುರಂಗಡಿ, ತಿನವೆಲ್ಲಿ, ತಿರುವನಂತಪುರ, ದರ್ಭಶಯನ, ಆಳ್ವಾರ್‌ತಿರುನಗರಿ, ರಾಮೇಶ್ವರ, ದ್ವಾರಕೆ, ಮಥುರ, ಬೃಂದಾವನ, ಪುಷ್ಕರ, ಅಯೋಧ್ಯೆ, ಪ್ರಯಾಗ, ಕಾಶಿ, ಬದರಿ, ಶ್ರೀನಗರ, ಜಗನ್ನಾಥ, ಸಾಲಗ್ರಾಮ, ರಾಮನಾಥಪುರ, ತಿರುನಾರಾಯಣಪುರ, ತೊಂಡನೂರು, ಮುಂತಾದ ಪವಿತ್ರ ತೀರ್ಥ ಕ್ಷೇತ್ರಗಳನ್ನೂ, ಅಲ್ಲಿನ ದೇವಾಲಯಗಳ ಮೂರ್ತಿಗಳನ್ನೂ ಸಂದರ್ಶಿಸಿ, ಭಗವತ್ಸೇವೆಯನ್ನು ಮಾಡಿದರು. ಹೋದೆಡೆಗಳಲ್ಲೆಲ್ಲ ವಿದ್ವತ್ಸಭೆಗಳಲ್ಲಿ ವಾದ ಮಾಡಿ, ತಮ್ಮ ಸಿದ್ಧಾಂತದ ರಹಸ್ಯಗಳನ್ನೆಲ್ಲ ತಿಳಿಸಿ, ಅನೇಕರನ್ನು ಶ್ರೀವೈಷ್ಣವರನ್ನಾಗಿ ಮಾಡಿದರು. ಇವರ ಪಾಂಡಿತ್ಯ, ಪ್ರತಿಭೆ, ಭಕ್ತಿ, ಶೀಲಗಳನ್ನು ನೋಡಿದ ಸಾವಿರಾರು ಆಸ್ತಿಕರು ಇವರ ಶಿಷ್ಯರಾದರು. ಜೊತೆಗೆ ಇವರು ಹೋದ ಕಡೆಗಳಲ್ಲೆಲ್ಲ ಮಠಗಳ ಸ್ಥಾಪನೆಗೆ, ವಿಷ್ಣು ದೇವಾಲಯಗಳ ನಿರ್ಮಾಣಕ್ಕೆ ಮತ್ತು ಮೂರ್ತಿಗಳ ಪೂಜೆಗೆ ಕಾರಣರಾದರು.

ಸಂಸ್ಕೃತ ವೇದಾಂತ ಮತ್ತು ದ್ರಾವಿಡ ಪ್ರಬಂಧ ಎರಡೂ ಸಮರಸವುಳ್ಳವು ಎಂದು ಪ್ರತಿಪಾದಿಸಿ, ಸಂಸ್ಕೃತದ ವೇದದ ಜ್ಞಾನದ ಜೊತೆಗೆ ತಮಿಳಿನ ಆಳ್ವಾರುಗಳ ಅನುಭವಗಳಿಗೂ ಪ್ರಾಧಾನ್ಯ ನೀಡಿ, ಎರಡೂ ಭಾಷೆಗಳಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಆಧಾರವಾದ ಪ್ರಮಾಣ ಗ್ರಂಥಗಳು ಹೊರಬರಲು ಕಾರಣರಾಗಿ, ಅದು ಶಾಶ್ವತವಾಗಿ ನಿಲ್ಲುವಂತೆ ಮಾಡಿ.

ಉಭಯ ವೇದಾಂತ ಪ್ರವರ್ತಕ ಎಂಬುದನ್ನು ದೃಢಪಡಿಸಿ, ಅದಕ್ಕೆ ರಾಮಾನುಜ ದರ್ಶನ ಎಂದು ಹೆಸರು ಬರುವಂತೆಯೂ ಮಾಡಿದರು.

ರಾಮಾನುಜರಿಗೆ ಇರುವ ಹೆಸರು- ಬಿರುದುಗಳನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯವಾಗದಿರದು. ಯಾಮುನರು ತಮ್ಮ ಮೊಮ್ಮಗಳ ಮಗನಾದ ರಾಮಾನುಜರು ತಮ್ಮ ಶಿಷ್ಯನಾಗಬೇಕೆಂದು ಇಚ್ಛಿಸಿದಂತೆಯೇ, ಯಾಮುನರ ಸ್ತೋತ್ರರತ್ನವನ್ನು ಆಲಿಸಿದ ರಾಮಾನುಜರೂ, ಯಾಮುನರೇ ತಮ್ಮ ಗುರುಗಳಾಗಬೇಕೆಂದು ಇಚ್ಛಿಸಿದ್ದರು. ಆದರೆ ಇಬ್ಬರ ಭೇಟಿಯು ನಿಧಾನವಾದುದರಿಂದ ಆ ಇಚ್ಛೆ ಪೂರ್ಣಗೊಳ್ಳಲಿಲ್ಲ ಆದರೂ ನಮ್ಮಾಳ್ವಾರರಿಗೆ ಶ್ರೀಮನ್ನಾರಾಯಣನ ಕಟಾಕ್ಷವಾದಂತೆ, ಯಾದವಪ್ರಕಾಶರ ಗೋಷ್ಠಿಯಲ್ಲಿದ್ದ ರಾಮಾನುಜರನ್ನು ಯಾಮುನರು ದೂರದಿಂದಲೇ ಕಟಾಕ್ಷಿಸಿ, ಅವರು ವಿಶಿಷ್ಟಾದ್ವೈತ ಸಿದ್ಧಾಂತ ಪ್ರವರ್ತಕರಾಗುವಂತೆ ಅನುಗ್ರಹಿಸಿ ಅವರಿಗೆ ಇಳೆಯ ಪೆರುಮಾಳ್ ಎಂಬ ಹೆಸರನ್ನೂ ಕೊಟ್ಟರು. ಯಾಮುನರ ಅಂತಿಮ ಇಚ್ಛೆಯಂತೆ ಅವರ ನಂತರ ಆಚಾರ್ಯ ಪೀಠವನ್ನು ಅಲಂಕರಿಸಿದ ರಾಮಾನುಜರಿಗೆ ಯಾಮುನರಿಂದ ಉಪದೇಶವು ನೇರವಾಗಿ ಲಭ್ಯವಾಗದಿದ್ದರೂ, ಅವರ ಆಪ್ತ ಶಿಷ್ಯರಿಂದ ಉಪದೇಶವು ದೊರಕಿ, ಆ ಮೂಲಕ ಯಾಮುನರ ಪೂರ್ಣಾನುಗ್ರಹವು ದೊರಕಿತು ಈ ಶಿಷ್ಯರೂ ಸಹ ರಾಮಾನುಜರಿಗೆ ಒಂದೊಂದು ಹೆಸರು ಕೊಟ್ಟು ಹರಸಿ ಹೊಗಳಿದ್ದಾರೆ.

ಯಾಮುನರ ನಂತರ ಸ್ವಲ್ಪ ಕಾಲ ದರ್ಶನ ನಿರ್ವಾಹಕರಾಗಿದ್ದ ಪೆರಿಯ ನಂಬಿಗಳು, ರಾಮಾನುಜರ ಮುಖ್ಯ ಆಚಾರ್ಯರಾಗಿ ಇವರನ್ನು ರಾಮಾನುಜನ್ ಎಂದು ಕರೆದರು ; ಶ್ರೀರಂಗದಿಂದ ಮಧುರೆಗೆ ಬೇಸರವಿಲ್ಲದೆ ಹದಿನೆಂಟು ಬಾರಿ ಹೋಗಿ, ತಿರುಕ್ಕೋಟ್ಟಿಯೂರ್ ನಂಬಿಗಳನ್ನು ಒಲಿಸಿಕೊಂಡು, ಅವರಿಂದ ಬಹಳ ಶ್ರಮಪಟ್ಟು ಕಲಿತ ಅತಿ ಗೋಪ್ಯವಾದ ಮಂತ್ರಗಳ ರಹಸ್ಯಾರ್ಥವನ್ನು, ಸಕಲ ಚೇತನರ ಉದ್ಧಾರವಾಗಲೆಂದು ಎಲ್ಲರಿಗೂ ಉಪದೇಶಿಸಿದ ರಾಮಾನುಜರ ಬಗ್ಗೆ ಕೋಪಗೊಂಡಿದ್ದ ಗುರುಗಳು, ಭಗವಂತನ

ಕಾರುಣ್ಯಕ್ಕಿಂತಲೂ ರಾಮಾನುಜರ ಔದಾರ್ಯ-ಕಾರುಣ್ಯಗಳು ಮಹತ್ತರವಾದುವೆಂದು ಒಪ್ಪಿ ಅವರಿಗೆ ಎಂಬೆರುಮಾನಾರ್ ಎಂಬ ಹೆಸರಿಟ್ಟು ಶ್ಲಾಘಿಸಿದುದಲ್ಲದೆ, ಅವರದ್ದು ಎಂಬೆರುಮಾನಾರ್ ದರ್ಶನವೆಂದು ಕರೆಯಲ್ಪಡಲಿ ಎಂದೂ ಹರಸಿದರು : ರಾಮಾನುಜರಿಗೆ ದಿವ್ಯ ಪ್ರಬಂಧಗಳ ಅರ್ಥವನ್ನು ಕಲಿಸಿದ ತಿರುಮಲೈಯಾಂಡಾನ್, ತನಗಿಂತ ರಾಮಾನುಜರಿಗೇ ಪೂರ್ವಾಚಾರ್ಯರ ಅಭಿಪ್ರಾಯವು ಚೆನ್ನಾಗಿ ತಿಳಿದಿದೆಯೆಂದು ಹೇಳಿ ಅವರನ್ನು ಶಠಗೋಪನ್ ಪೊನ್ನಡಿ ಎಂದು ಕರೆದರು ; ಸೋದರ ಮಾವನಾದ ತಿರುಮಲೈ ನಂಬಿಗಳಲ್ಲಿ ಕಾಲಕ್ಷೇಪ ಮಾಡಿ ಪ್ರಪತ್ತಿವೇದ, ಶರಣಾಗತಿಶಾಸ್ತ್ರ ಎನಿಸಿದ ರಾಮಾಯಣದ ಗೂಢಾರ್ಥವನ್ನರಿತರು ತನ್ನಂತೆಯೇ ತಿರುಮಲೆಯ ಶ್ರೀನಿವಾಸ ದೇವರಿಗೆ ಮನಃಪೂರ್ವಕವಾಗಿ ಸೇವೆಯನ್ನು ಸಲ್ಲಿಸುತ್ತಿದ್ದ ರಾಮಾನುಜರನ್ನು ಅವರು ಕೋಯಿಲಣ್ಣನ್ ಎಂದು ಕರೆದರು ; ಕಾಂಚೀಪೂರ್ಣ, ಮಹಾಪೂರ್ಣರಿಗೆ ಸರಿಯಾಗಿ ಗೌರವ ಸಲ್ಲಿಸಲಾಗದ, ಆಧ್ಯಾತ್ಮಿಕ ಸಾಧನೆಗೆ ಹಾಗೂ ನೂತನ ಸಿದ್ಧಾಂತದ ಪ್ರಚಾರಕ್ಕೆ ಅಡ್ಡಿ ಎನಿಸಿದ್ದ, ಗೃಹಸ್ಥ ಜೀವನವನ್ನು ತೊರೆದು ಲೋಕೋದ್ಧಾರಕ್ಕೆ ಅವಶ್ಯವಾದ ಸಂನ್ಯಾಸವನ್ನು ವರದರಾಜಸ್ವಾಮಿಯ ಸನ್ನಿಧಿಯಲ್ಲಿ ಸ್ವೀಕರಿಸಿ, ದೇವರಿಂದಲೇ ರಾಮಾನುಜಮುನಿ, ಯತಿರಾಜ ಎನಿಸಿಕೊಂಡರು ; ಶ್ರೀರಂಗದ ರಂಗನಾಥ ದೇವರಿಂದ ಉಡೈಯವರ್ ಎಂಬ ಹೆಸರು ಪಡೆದರು ; ತಿರುಮಲೆಯ ಶ್ರೀನಿವಾಸ ದೇವರಿಗೆ ಶಂಖಚಕ್ರಗಳನ್ನು ಕೊಟ್ಟು, ಅವನಿಂದ ದೇಶಿಕೇಂದ್ರನ್ ಎನಿಸಿಕೊಂಡರು ; ಮೇಲುಕೋಟೆಯ ಚಲುವನಾರಾಯಣನನ್ನು ಪುತ್ರನಾಗಿ ಭಾವಿಸಿ ಸ್ವಾಮಿತಂದೆ ಎನಿಸಿದರು ; ಶ್ರೀಭಾಷ್ಯವನ್ನು ಆಲಿಸಿದ ಕಾಶ್ಮೀರದ ಶ್ರೀನಗರದ ಭಟ್ಟಿ ಮಂಟಪದಲ್ಲಿನ ಶಾರದಾದೇವಿಯಿಂದ ಭಾಷ್ಯಕಾರ ಎಂಬ ಬಿರುದನ್ನು ಪಡೆದರು. ಇವರ ಶ್ರೀಭಾಷ್ಯದ ಹಿರಿಮೆಯನ್ನು ಒಪ್ಪಿದ ಸರಸ್ವತಿಯು, ಪರಮಾತ್ಮನ ಪ್ರಥಮ ಅವತಾರವಾದ ಹಯಗ್ರೀವನು ಬ್ರಹ್ಮನಿಗೆ ವೇದೋಪದೇಶ ಮಾಡಿದಾಗ ಅನುಗ್ರಹಿಸಿದ್ದ ಶ್ರೀ ಲಕ್ಷ್ಮೀಹಯವದನನ ದಿವ್ಯಮಂಗಳ ವಿಗ್ರಹವನ್ನು ಕೊಟ್ಟಳು ; ಶ್ರೀರಂಗದಲ್ಲಿ ಭಗವಂತನನ್ನು ತಮ್ಮ ರಮಣೀಯ ಕಂಠದಿಂದ ರಾಗವಾಗಿ ಸ್ತೋತ್ರ ಮಾಡುವ ವಿಣ್ಣಪ್ಪಂಶೆಯ್ವಾರ್ ಅರೈಯರ್‌ಗಳಲ್ಲಿ ಮುಖ್ಯರಾದ ಆಳವಂದಾರಾಳ್ವಾನ್ ಅವರಿಗೆ ಸೇವೆ ಮಾಡಿ, ಅವರಿಂದ ದಿವ್ಯ ಪ್ರಬಂಧದ

ಮೂಲವನ್ನು ಮತ್ತು ಆಚಾರ್ಯಾಭಿಮಾನದ ಲಕ್ಷಣಗಳನ್ನು ಗ್ರಹಿಸಿದ, ಕೈಂಕರ್ಯ ಸಾಮ್ರಾಜ್ಯದ ಒಡೆಯರಾಗಿದ್ದ ರಾಮಾನುಜರನ್ನು ಅವರು ಲಕ್ಷ್ಮಣಮುನಿ ಎಂದು ಕರೆದರು ; ಭಿಕ್ಷೆಗೆ ಹೋಗುತ್ತಿದ್ದ ಕಾಲದಲ್ಲಿ ಸಕಲ ವೇದಶಾಸ್ತ್ರಾರ್ಥಸಾರವೆನಿಸಿದ್ದ ತಿರುಪ್ಪಾವೈ ಗೀತೆಯನ್ನು ಹಾಡುತ್ತಿದ್ದುದರಿಂದ ತಿರುಪ್ಪಾವೈಜೀಯರ್ ಎಂಬ ಹೆಸರು ಬಂದಿತು ; ಆಂಡಾಳ್ ಆಸೆಪಟ್ಟು, ನೆರವೇರಿಸಲಾಗದಿದ್ದ ಕೈಂಕರ್ಯವನ್ನು ಮಾಡಿ ಗೋದಾಗ್ರಜರೆನಿಸಿಕೊಂಡರು ; ಸಾರಾಸಾರ ಮಿಶ್ರವಾದ ಶಾಸ್ತ್ರಗಳಲ್ಲಿ ಅಸಾರವಾದುದನ್ನು ತ್ಯಜಿಸಿ ಸಾರವಾದುದನ್ನು ಆರಿಸಿಕೊಂಡು, ಬ್ರಹ್ಮಜ್ಞಾನಕ್ಕೆ ಪ್ರೇರಕರಾಗಿ, ಅದನ್ನು ಪ್ರಕಾಶಗೊಳಿಸಿ, ವಿಷ್ಣು ಪತ್ನಿಯಾದ ಶ್ರೀದೇವಿಯ ಹೆಜ್ಜೆಯನ್ನನುಸರಿಸಿ ರಾಜಹಂಸವೆನಿಸಿದರು ; ಭಗವಂತನನ್ನು ಮಾತ್ರ ಅಪೇಕ್ಷಿಸಿ, ಮಧುರ ಭಾವನೆಗಳೇ ತುಂಬಿರುವ ದಿವ್ಯ ಪ್ರಬಂಧಗಳ ಕಾಲಕ್ಷೇಪ ಮಾಡಿ, ನೂರೆಳು ದಿವ್ಯ ದೇಶಗಳನ್ನು ಸಂದರ್ಶಿಸಿ, ತಡೆ ಆತಂಕಗಳಿಲ್ಲದೆ ಗೌರವವನ್ನು ಪಡೆದು ಭೃಂಗರಾಜನೆಂದು ಕರೆಸಿಕೊಂಡರು.

ಹೀಗೆ ನೂರಿಪ್ಪತ್ತು ವರ್ಷಗಳ ತುಂಬು ಜೀವನವನ್ನು ನಡೆಸಿದ ರಾಮಾನುಜರು, ತಮ್ಮ ಶ್ರೇಷ್ಠ ಹಾಗೂ ತ್ಯಾಗಮಯ ಜೀವನ–ಕೃತಿ–ಬೋಧನೆಗಳಿಂದ ಇತಿಹಾಸ ನಿರ್ಮಾಪಕರೆನಿಸಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು. ಪ್ರಾಚೀನ ಋಷಿ ಪರಂಪರೆಗೆ ಸೇರಿದ್ದರೂ ಕಾಲ ದೇಶಸ್ಥಿತಿಗಳಿಗೆ ಅನುಗುಣವಾಗಿ ವರ್ತಿಸುವ ಸದಸದ್ವಿವೇಕವು ಅವರಲ್ಲಿದ್ದಿತು. ಆದುದರಿಂದಲೇ ರಾಮಾನುಜರಿಗೆ ಮೊದಲಿನಿಂದಲೂ ತಮ್ಮ ಕುಲದ ಮಡಿವಂತಿಕೆಯು ಹಿಡಿಸಿರಲಿಲ್ಲ. ಬ್ರಾಹ್ಮಣರಲ್ಲದ ಕೆಳಜಾತಿಯವರನ್ನೂ ಯೋಗ್ಯತೆಯಿದೆ ಎಂಬ ಕಾರಣದಿಂದ ಗುರುವಾಗಿ ಸ್ವೀಕರಿಸುವ ಹಿರಿತನ ಅವರಲ್ಲಿದ್ದಿತು. ಅಹಂಕಾರಿಯಾದ ಧನಿಕ ಶಿಷ್ಯನ ಆತಿಥ್ಯವನ್ನು ತಿರಸ್ಕರಿಸಿ, ದರಿದ್ರನಾದರೂ ಭಕ್ತನಾಗಿರುವ ಶಿಷ್ಯನಲ್ಲಿ ಆತಿಥ್ಯವನ್ನು ಸ್ವೀಕರಿಸಿದರು.

ಜ್ಞಾನಪ್ರಧಾನವಾದ ಅದ್ವೈತಪಂಥದ ಶೈವಮತದ ಗುರುಗಳಲ್ಲಿ ಕಲಿತರೂ, ಭಕ್ತಿಪ್ರೇಮ ಪ್ರಧಾನವಾದ ವಿಶಿಷ್ಟಾದ್ವೈತಪಂಥದ ಶ್ರೀವೈಷ್ಣವ

ಮತದ ಶ್ರೇಷ್ಠತೆಯನ್ನು ಎತ್ತಿತೋರಿಸಿದರು. ದುರಭಿಪ್ರಾಯಗಳನ್ನು ಹೊಂದಿದ್ದ ಸಾಧಾರಣಾ ವಿರೋಧಿಯಾದ ಗುರುಗಳನ್ನೇ ಸಹಿಷ್ಣುತೆಯಿಂದ ಶಾಸ್ತ್ರಾರ್ಥವಾದದಲ್ಲಿ ಸೋಲಿಸಿ ತಿದ್ದಿ ತಮ್ಮ ಶಿಷ್ಯರಾಗುವಂತೆ ಮಾಡಿ, ಅವರಿಂದ ಗ್ರಂಥವನ್ನು ಬರೆಸಿದರು.

ಜಾತಿಕುಲಗಳಿಗಿಂತ ಸರ್ವಮಂತ ಸಮಾನತೆ ಹಾಗೂ ಸಮಾಜದ ಹಿತ ಚಿಂತನೆ ಮುಖ್ಯವೆಂದು ಹೇಳಿ, ಯಾವುದೇ ವ್ಯಕ್ತಿಯನ್ನು ಅವನ ಜನ್ಮ, ಜಾತಿ. ಕುಲ, ಗೋತ್ರಗಳ ನೆಪದಲ್ಲಿ, ಧರ್ಮಮಾರ್ಗದಿಂದ ದೂರವಿಡುವುದು ಸರಿಯಲ್ಲ, ನೀಚಕುಲದಲ್ಲಿ ಜನಿಸಿದರೂ ಯೋಗ್ಯತೆ ಇದ್ದಲ್ಲಿ ಶ್ರೇಷ್ಠರೆನಿಸಿಸಲು ಯಾವುದೇ ಅಡ್ಡಿ ಆತಂಕಗಳು ಇರಬಾರದು, ಎಂಬುದು ಅವರ ಅಭಿಪ್ರಾಯ. ಉಚ್ಚಕುಲದ ಕೆಲವು ಸಾಂಪ್ರದಾಯಿಕ ಪ್ರತಿಬಂಧಗಳನ್ನು ಉಳಿಸಿಕೊಂಡರೂ, ಮುಕ್ತಿಯನ್ನು ಕೀಳು ಜಾತಿಯವರೆಂದೆನಿಸಿಕೊಂಡವರಿಗೂ ತೆರೆದಿಟ್ಟು, ಅವರನ್ನು ತಿರುಕುಲತ್ತಾರ್ ಎಂದು ಕರೆದು, ಮುಂದೆ ಬಸವಣ್ಣನವರಿಂದ ಹಿರಿಯ ಕುಲದವರೆಂದೂ, ಗಾಂಧೀಜಿಯಿಂದ ಹರಿಜನರೆಂದೂ ಕರೆಸಿಕೊಂಡವರಿಗೆ, ತಮ್ಮ ಕಾಲದಲ್ಲಿಯೇ ಮೇಲುಕೋಟೆ, ಬೇಲೂರು ಮುಂತಾದ ದೇವಾಲಯಗಳ ಪ್ರವೇಶ, ಮೂರ್ತಿದರ್ಶನ, ತೀರ್ಥಪ್ರಸಾದ ಸ್ವೀಕಾರಗಳಿಗೆ ಅವಕಾಶವನ್ನು ಕಲ್ಪಿಸಿ, ಶ್ರೇಷ್ಠ ಸಮಾಜ ಸುಧಾರಕರೆನಿಸಿಕೊಂಡಿದ್ದಾರೆ.

ಹೀಗೆ ಇಹ–ಪರ, ಬುದ್ಧಿ–ಭಾವ, ಆದರ್ಶ–ಯಥಾರ್ಥ ಎಲ್ಲದರ ಮಧುರ ಸಮನ್ವಯವನ್ನು ಸಾಧಿಸಿ, ಇಂದ್ರಿಯ ಹಾಗೂ ಆತ್ಮಕಲ್ಯಾಣಗಳಿಗೆ ನೆರವಾಗಿ, ವ್ಯಕ್ತಿಶೀಲದೊಂದಿಗೇ ವಿಶ್ವಕಲ್ಪನೆಯನ್ನೂ ಬೋಧಿಸಿ. ಎಲ್ಲರ ಅನುಭವಕ್ಕೂ ನಿಲುಕುವ ಸಿದ್ಧಾಂತವನ್ನು ಸ್ಥಾಪಿಸಿದರು

"ಭಗವಂತನಲ್ಲಿಯೇ ಅಡಗಿದ್ದು, ಅವನ ಸಂಕಲ್ಪವಾದಾಗ ಅವನಿಂದ ಹೊರಬಂದು, ಕೊನೆಗೆ ಅವನಲ್ಲಿಯೇ ಸೇರುವ ಈ ಜಗತ್ತು ಮಿಥ್ಯೆ, ಕಲ್ಪಿತ ಆಗಿರದೆ, ಸತ್ಯ, ಶಾಶ್ವತ ಆಗಿದೆ. ಅನಂತಕಲ್ಯಾಣ ಗುಣ ಪರಿಪೂರ್ಣನೂ, ಲಕ್ಷ್ಮೀಪತಿಯೂ, ಆದ ನಾರಾಯಣನೇ ಈ ಜಗತ್ತಿಗೆ ಅಧಿಪತಿ. ಅವನೇ ಪರಬ್ರಹ್ಮ, ಅವನು ಎಲ್ಲ ಚರಾಚರ ವಸ್ತುಗಳನ್ನೂ ತನ್ನ ಶರೀರವಾಗಿ ಧರಿಸಿದ್ದಾನೆ.

ದೇಹದ ಕಾರ್ಯಗಳು ಜೀವಿಯ ಸುಖ ಸಂತೋಷಗಳಿಗಾಗಿ ಇರುವಂತೆಯೋ, ಈ ಜೀವ ಜಗತ್ತುಗಳೂ ಪರಮಾತ್ಮನ ಸಲುವಾಗಿಯೇ ಇವೆ. ತನ್ನಿಂದ ಬೇರೆಯಾಗಿರುವ, ತನ್ನ ದೇಹವಾದ, ಈ ಪ್ರಪಂಚದ ಸಕಲ ಪ್ರಾಣಿಗಳೂ ಪರಸ್ಪರ ಅನುಕೂಲದಲ್ಲಿರಬೇಕೆಂಬುದು ಅವನ ಅಪೇಕ್ಷೆ. ಎಲ್ಲರೂ ಇಲ್ಲಿ ಚೆನ್ನಾಗಿ, ಸಂತೋಷ–ಸಾಮರಸ್ಯಗಳಿಂದ ಬಾಳಬೇಕು. ನಿಸ್ವಾರ್ಥ ಮನೋ ಭಾವದಿಂದ, ಯಾವ ಫಲಾಪೇಕ್ಷೆಯೂ ಇಲ್ಲದೆ, ಸಮಾಜ ಸೇವೆಗೆ ತನುಮನ ಧನಗಳನ್ನು ಒಪ್ಪಿಸಲು ಸದಾ ಸಿದ್ಧರಿರಬೇಕು. ಜಗತ್ತಿನ ಸೃಷ್ಟಿ ಸ್ಥಿತಿಲಯ ಗಳನ್ನು ನಡೆಸುವುದು ಅವನ ಲೀಲೆ.

"ಸರ್ವೇಶ್ವರನ ನಿಯಮನಗಳನ್ನು ಉಲ್ಲಂಘನೆ ಮಾಡಿ ನಡೆದುಕೊಂಡ ಕಾರಣದಿಂದ ಉಂಟಾದ ಸಂಸಾರವು ಅಂದರೆ ಹುಟ್ಟು–ಸಾವು, ಸತ್ಯವಾದುದು. ತನ್ನನ್ನು ಆಶ್ರಯಿಸಿದ ಜೀವರಾಶಿಯನ್ನು ಸಂಸಾರ ಬಂಧನದಿಂದ ಬಿಡುಗಡೆ ಮಾಡಿ, ನಿತ್ಯಾನಂದರೂಪದ ಮುಕ್ತಿಯನ್ನು ಒದಗಿಸುವವನು ಆತನೇ. ಪ್ರಕೃತಿ ಮಂಡಲದ ಸಂಪರ್ಕವಿಲ್ಲದ ಪರಮಪದ ಅಥವಾ ವೈಕುಂಠದಲ್ಲಿ ಮುಕ್ತಿಯ ಸ್ಥಾನವೊಂದಿದೆ. ಆ ಪರಬ್ರಹ್ಮನ ಅನುಭವವೇ ಪರಮ ಪುರುಷನ ಪ್ರಾಪ್ತಿ. ಆತನ ಪ್ರಾಪ್ತಿಗೆ ಭಕ್ತಿಯೇ ಪರಮೋಪಾಯ. ಅದಕ್ಕೆ ಅಡ್ಡಿಯಾಗಿರುವ ಹಲವಾರು ತೊಡಕುಗಳು ನಿವಾರಣೆಯಾಗಬೇಕಾದರೆ, ಆತನ ಚರಣಾರವಿಂದವನ್ನು ಮರೆಹೋಗುವುದೇ ಏಕೈಕ ಮಾರ್ಗ. ವೇದೋಪನಿಷತ್ತುಗಳು, ಸ್ಮೃತಿ ಪುರಾಣಾಗಮಗಳು, ಇದನ್ನೇ ಪ್ರತಿಪಾದಿಸು ತ್ತವೆ." ಇದು ರಾಮಾನುಜರ ಅಭಿಪ್ರಾಯ.

"ಶ್ರೀಲಕ್ಷ್ಮೀನಾರಾಯಣನೇ ಪರತತ್ತ್ವ. ಅವನೇ ನಮ್ಮೆಲ್ಲರ ತಂದೆ. ಆತನ ವಕ್ಷಸ್ಥಲದಲ್ಲಿರುವ ಶ್ರೀಮಹಾಲಕ್ಷ್ಮಿಯೇ ನಮ್ಮೆಲ್ಲರ ತಾಯಿ, ನಾವೆಲ್ಲರೂ ಅಣ್ಣ ತಮ್ಮಂದಿರು ಹಾಗೂ ಅಕ್ಕ ತಂಗಿಯರು. ಚೇತನ– ಅಚೇತನಗಳೆಲ್ಲವೂ ಅವನಿಗೆ ಅಧೀನವಾದುವು. ಚೇತನರಾದ ನಾವೆಲ್ಲ ಅವನ ಕಿಂಕರರು. ಇಡೀ ಪ್ರಪಂಚವೇ ಅವನ ಶರೀರವಾದುದರಿಂದ, ಶರೀರದಲ್ಲಿನ ಯಾವುದೇ ಅವಯವಕ್ಕೆ ನೋವಾದರೂ ಅದರಲ್ಲಿ ನೆಲಸಿರುವ ಅಂತರಾತ್ಮನಿಗೆ

ಸಹ್ಯವಾಗದು. ಯಾವುದೇ ಪ್ರಾಣಿ ಮಾತ್ರಕ್ಕೆ ನಾವು ದುಃಖ, ದ್ರೋಹ, ನೋವು ಉಂಟು ಮಾಡಿದರೂ, ಅದು ಅವುಗಳಲ್ಲಿ ಅಂತರ್ಯಾಮಿಯಾಗಿ ನೆಲಸಿರುವ ಪರಮಾತ್ಮನಿಗೇ ಮಾಡಿದಂತಾಗುತ್ತದೆ. ಮಾನವನು ತನ್ನ ಆತ್ಮೋನ್ನತಿ ಮತ್ತು ಶಾಶ್ವತ ಸುಖವಾದ ಮೋಕ್ಷಗಳನ್ನು ಪಡೆಯಲು, ಶ್ರೀಮನ್ನಾರಾಯಣನಲ್ಲಿ ದೃಢವಾದ ವಿಶ್ವಾಸಪೂರ್ವಕ ಶರಣಾಗತಿಯಲ್ಲದೆ ಬೇರೆ ಗತಿಯಿಲ್ಲ. ಅಂದರೆ ಭಗವಂತನನ್ನು ನಂಬಿ, ಅವನನ್ನು ಭಕ್ತಿಯಿಂದ ಧ್ಯಾನಿಸಿ, ಅವನನ್ನು ಪೂರ್ಣವಾಗಿ ಶರಣು ಹೊಕ್ಕರೆ, ಮುಕ್ತಿಯು ಖಂಡಿತ ವಾಗಿ ದೊರಕುತ್ತದೆ" ಇದು ರಾಮಾನುಜರ ಉಪದೇಶ.

"ಭಗವಂತನ ಆಜ್ಞಾರೂಪವಾದ ವೇದ ಮತ್ತು ಧರ್ಮ ಶಾಸ್ತ್ರಗಳಲ್ಲಿ ಹೇಳಿರುವಂತಹ, ಸುವ್ಯವಸ್ಥಿತ ಜೀವನ ಕ್ರಮವನ್ನು ಏರ್ಪಡಿಸಿಕೊಂಡು ಅದರಂತೆ ನಡೆಯಬೇಕು. ವಿಹಿತವಾದ ನಿತ್ಯ ನೈಮಿತ್ತಿಕ ಕರ್ಮಗಳೆಲ್ಲವನ್ನೂ ಭಗವದಾಜ್ಞೆ, ಭಗವತ್ಪ್ರೀತ್ಯರ್ಥ ಎಂದು ತಿಳಿದು, ಭಗವತ್ಕೈಂಕರ್ಯ ರೂಪ ದಲ್ಲಿ ಅನುಷ್ಠಾನ ಮಾಡಬೇಕು. ಸರ್ವ ಕಾಲದಲ್ಲಿಯೂ ದ್ವಯ ಮಂತ್ರೋ ಚ್ಚಾರಣೆ ಮಾಡುತ್ತ, ಅದರ ಒಳಾರ್ಥವನ್ನು ಅನುಸಂಧಾನ ಮಾಡಬೇಕು, ಶ್ರೀಭಾಷ್ಯ ಹಾಗೂ ದಿವ್ಯ ಪ್ರಬಂಧಗಳನ್ನು ಮನನ ಮಾಡಬೇಕು, ಇಚ್ಛೆ ಇದ್ದು ಪ್ರಾರ್ಥಿಸಿದವರಿಗೆ ಅದನ್ನು ಬೋಧಿಸಬೇಕು. ಸಾಧ್ಯವಾದರೆ ದಿವ್ಯ ಕ್ಷೇತ್ರಗಳಲ್ಲಿ ವಾಸಿಸಿ, ಅಲ್ಲಿನ ದೇವಾಲಯಗಳಲ್ಲಿ ದೀಪ, ಧೂಪ, ನೈವೇದ್ಯ, ಮಾಲೆಗಳನ್ನು ಸಮರ್ಪಿಸುವ ಕೈಂಕರ್ಯಗಳನ್ನು ಮಾಡಬೇಕು.

"ಶ್ರೀ ವೈಷ್ಣವ ಸಿದ್ಧಾಂತವನ್ನು ಸರಿಯಾಗಿ ಅರಿತು ಆಚರಿಸುವ ಶ್ರೀ ವೈಷ್ಣವರ ಅಭಿಮಾನಕ್ಕೆ ಪಾತ್ರನಾಗಲು ಯತ್ನಿಸಬೇಕು. ಅನುಕೂಲರಾದ ಶ್ರೀ ವೈಷ್ಣವರನ್ನು ಕಂಡಾಗ, ಮಂದಮಾರುತ, ಬೆಳದಿಂಗಳು, ಅರಳಿದ ಹೂ ಇವುಗಳನ್ನು ಕಂಡಂತೆ ಸಂತೋಷಿಸಬೇಕು ; ಪ್ರತಿಕೂಲರಾದ ಅಂದರೆ ಭಗವಂತ-ಭಾಗವತರನ್ನು ದ್ವೇಷಿಸುವವರನ್ನು ಕಂಡಾಗ, ಬೆಂಕಿ, ಹಾವು ಇವುಗಳನ್ನು ಕಂಡಂತೆ ಭಯಪಟ್ಟು ದೂರ ಸರಿಯಬೇಕು ; ಪ್ರೀತಿಸದ ಅಥವಾ ದ್ವೇಷಿಸದ ಇತರ ಸಂಸಾರಿಗಳನ್ನು ಕಂಡಾಗ, ಕಲ್ಲು, ಮರ ಇವನ್ನು

ಕಂಡಂತೆ ಉದಾಸೀನರಾಗಿರಬೇಕು." ಇದು ರಾಮಾನುಜರ ದಿವ್ಯಾಜ್ಞೆ. ಇದು ಲೋಕ ಹಿತೈಷಿಣಿಯಾಗಿರುವುದರಿಂದ, ವಿಶ್ವದ ಎಲ್ಲ ಕಡೆ ವ್ಯಾಪಿಸ ಬೇಕೆಂಬುದು ಶಿಷ್ಯರ ಹಿರಿಯಾಸೆ

ಶ್ರೀಮಲ್ಲಕ್ಷಣ ಯೋಗಿನಸ್ತು ಭುವನಂ ಸತ್ಯಂ ತದೀಶಃ ಶ್ರಿಯಃ
ಕಾಂತೋ ಬ್ರಹ್ಮ ಸ ಏವ ಸೋऽಖಿಲತನುರ್ಭಿನ್ನಾಸ್ತತಶ್ಚೇತನಾಃ ।
ಸತ್ಯಾಸಂಸೃತಿರೀಶನಿಗ್ರಹಕೃತಾ ಮುಕ್ತಿಸ್ತು ಭಕ್ತ್ಯಾದಿನಾ
ತತ್ಪ್ರಾಪ್ತಿಃ ಪರಮೇ ಪದೇ ತದನುಭೂತ್ಯಾಖ್ಯೇತಿ ಸಂಚಕ್ಷತೇ ॥

ಇದರಲ್ಲಿ ರಾಮಾನುಜ ಸಿದ್ಧಾಂತದ ಸಾರವೆಲ್ಲ ಕ್ರೋಢೀಕರಿಸಲ್ಪಟ್ಟಿದೆ.

ಶ್ರೀಭಾಷ್ಯ ದ್ರಮಿಡಾಗಮೌ ಪ್ರವಚನೇ ಶ್ರೀಶಸ್ಥಲೇಷ್ವನ್ವಹಂ
ಕೈಂಕರ್ಯಂ ಯದುಶೈಲ ನಿತ್ಯವಸತಿಸ್ಸಾರ್ಥ ದ್ವಯೋಚ್ಚಾರಣಂ ।
ಯದ್ವಾ ಭಾಗವತಾಭಿಮಾನವಸತಿಶ್ಶ್ರೇಯಸ್ಸತಾಮಿತ್ಯಲಂ
ಶಿಷ್ಯಾನ್ವ್ಯಾಹಯತೀಶ್ವರಃ ಪರಮಗಾದ್ವಿಷ್ಣೋಃ ಪದಂ ಶಾಶ್ವತಂ ॥೧॥

ಪಠಿತ್ವಾ ಭಾಷ್ಯಂ ತತ್ಪ್ರವಚನಮಶಕ್ತೌ ಶಠರಿಪೋ
ಗಿರಿಶ್ರದ್ಧಾವಾಸಃ ಪ್ರಭು ಪರಿಚಿತಸ್ಥಾನನಿವಹೇ ।
ಪ್ರಭೋಃ ಕೈಂಕರ್ಯಂ ವಾ ಪ್ರಪದನ ಮನೋರರ್ಥ ಮನನಂ
ಪ್ರಪನ್ನಾನಾಂ ವಾಮೇ ಭವತು ಪರಿಚರ್ಯಾ ಪರಿಚಯಃ ॥೨॥

ಈ ಶ್ಲೋಕಗಳು ರಾಮಾನುಜರ ದಿವ್ಯಾಜ್ಞೆಯನ್ನು ತಿಳಿಸುತ್ತವೆ.

ಅತ್ಯಪೂರ್ವವಾದ ಜ್ಞಾನ ಭಕ್ತಿ ವಿರಕ್ತಿ, ಭವ್ಯ, ಉದಾರ ಹಾಗೂ ವಿಶಾಲ ಆದ ಮನೋಭಾವ, ಸಮನ್ವಯ ದೃಷ್ಟಿ, ಕಣ್ಣಿಗೆ ಕಾಣಿಸಿಕೊಂಡವ

ರೆಲ್ಲರನ್ನೂ ಸಲಹಬೇಕೆಂಬ ಕರುಣಾದ್ರ್ರಹೃದಯ, ಮಾನವ ವರ್ಗದಲ್ಲೇ ಅಪಾರ ಸಹಾನುಭೂತಿ, ನಿಜವಾದ ತತ್ತ್ವಹಿತ ಪುರುಷಾರ್ಥಗಳನ್ನು ಉಪದೇಶಿಸಿ ಜನರಲ್ಲಿರುವ ವಿಪರೀತ ವೃತ್ತಿಯನ್ನು ತಡೆ ಹಿಡಿಯಬೇಕೆಂಬ ಹಿರಿಯಾಸೆ, ಶಿಥಿಲವಾಗಿದ್ದ ವಿಶಿಷ್ಟಾದ್ವೈತ ಸಂಪ್ರದಾಯ ಹಾಗೂ ಶ್ರೀವೈಷ್ಣವ ಸಮಾಜಗಳನ್ನು ಸುಸಂಘಟಿಸಬೇಕೆಂಬ ದೃಢ ನಿರ್ಧಾರ, ಎಂಥವರ ಹೃದಯವನ್ನೂ ಪರಿವರ್ತನಗೊಳಿಸಬಲ್ಲ ಸಹಜ ಸುಂದರ ಗಂಭೀರ ವಾಕ್ಸಂಪತ್ತು, ನಿಷ್ಕಪಟ, ನಿಸ್ವಾರ್ಥ, ಉದಾತ್ತ, ಪರಿಶುದ್ಧ, ಸಂತೋಷ ಜನಕ ವ್ಯಕ್ತಿ ಜೀವನ-ಇವು ರಾಮಾನುಜರ ವೈಶಿಷ್ಟ್ಯ.

ಪಾಂಚರಾತ್ರಾಗಮದ ಪ್ರಮಾಣ ಸ್ಥಾಪನೆ, ವಿಷ್ಣು ದೇವಾಲಯಗಳ ಪುನರುಜ್ಜೀವನ ಮತ್ತು ಅವುಗಳಲ್ಲಿ ಸುವ್ಯವಸ್ಥಿತ ಪೂಜಾ ಕ್ರಮದ ಏರ್ಪಾಡು, ಪ್ರಪತ್ತಿಯ ಮೂಲಕ ಎಲ್ಲರಿಗೂ ಮೋಕ್ಷೋಪದೇಶ-ಇವು ರಾಮಾನುಜರು ಸಾಧಿಸಿದ ಮೂರು ಮಹತ್ಕಾರ್ಯಗಳು. ಆದುದರಿಂದಲೇ ಅವರು ಪ್ರಪಂಚದ ಶ್ರೇಷ್ಠ ವ್ಯಕ್ತಿಗಳಾಗಿ "ವಿಶಿಷ್ಟಾದ್ವೈತದ ವಿಶ್ವಾಚಾರ್ಯ"ರೆನಿಸಿದರು.

ಕೂರೇಶ, ದಾಶರಥಿ, ಕಿಡಾಂಬಿ ಆಚ್ಚಾನ್, ಆಂಧ್ರಪೂರ್ಣ, ತಿರುವರಂಗತ್ತಮುದನಾರ್, ತಿರುಕ್ಕುರುಹೈಪ್ಪಿರಾನ್‌ಪಿಳ್ಳಾನ್, ನಡಾದೂರಾಳ್ವಾನ್, ಎಂಗಳಾಳ್ವಾನ್, ಎಂಬಾರ್, ಗೋವಿಂದ ಜೀಯರ್, ಪರಾಶರ, ದೇವರಾಜ -ಇವರು ರಾಮಾನುಜರ ಪ್ರಮುಖ ಶಿಷ್ಯರು.

ತಿರುವರಂಗತ್ತಮುದನಾರ್ ರಚಿಸಿ ಹಾಡಿದ ರಾಮಾನುಜನೂತ್ತಂದಾದಿ, ಆಂಧ್ರಪೂರ್ಣರು ರಚಿಸಿದ ಯತಿರಾಜ ವೈಭವ ಮತ್ತು ರಾಮಾನುಜ ಅಷ್ಟೋತ್ತರ, ವೇದಾಂತ ದೇಶಿಕರ ಯತಿರಾಜ ಸಪ್ತತಿ, ಮಣವಾಳ ಮಾಮುನಿಗಳ ಯತಿರಾಜ ವಿಂಶತಿ ಮತ್ತು ಆರ್ತಿ ಪ್ರಬಂಧ-ಇವು ರಾಮಾನುಜರ ಹಿರಿಮೆಯನ್ನು ಸಾರುತ್ತವೆ ಕೂರೇಶ, ಪರಾಶರಭಟ್ಟ, ನಂಜೀಯರ್, ಸುದರ್ಶನ ಸೂರಿ, ಪಿಳ್ಳೈಲೋಕಾಚಾರ್ಯ, ವೆಂಕಟಾಧ್ವರಿ, ವಿವೇಕಾನಂದ ಮುಂತಾದ ಭಾರತೀಯರೂ, ಮ್ಯಾಕ್ಸ್‌ಮುಲ್ಲರ್, ನಿನಿಯನ್ ಸ್ಮಾರ್ಟ್,

ವ್ಯಾನ್‌ಬ್ಯೂಟೆನಿನ್ ಮುಂತಾದ ವಿದೇಶೀಯರೂ ರಾಮಾನುಜರ ಬದುಕು, ಬರಹ, ಬೋಧನೆಗಳ ಬಗ್ಗೆ ಕೊಂಡಾಡಿದ್ದಾರೆ.

ಆಚಾರ್ಯ ರಾಮಾನುಜರನ್ನು ಆಶ್ರಯಿಸಿದ ಶಿಷ್ಯರಲ್ಲಿ ಅನೇಕರು ಶಾಸ್ತ್ರಗಳಲ್ಲಿ ಪಂಡಿತರು, ನಿಪುಣರು ಹಾಗೂ ಗ್ರಂಥ ನಿರ್ಮಾಣದಲ್ಲಿ ಚತುರರು ಆಗಿದ್ದರೂ, ಸ್ವಾಭಿಮಾನಿಗಳಾಗಿದ್ದುದರಿಂದ, ಆಚಾರ್ಯ ಸೂಕ್ತಿಗಳಿಗೆ ತಮ್ಮದೇ ಆದ ಅರ್ಥಗಳು ಸರಿ ಎಂದು ಸಮರ್ಥನ ಮಾಡತೊಡಗಿದರು. ಹೀಗೆ ಅಭಿಪ್ರಾಯ ಕಲ್ಪನೆಯಲ್ಲಿ ಭೇದವಿರುವುದನ್ನು ಗಮನಿಸಿದ ರಾಮಾನುಜರು, ತಮ್ಮ ಅನಂತರ ಆಗಬಹುದಾದ ಪರಿಣಾಮವನ್ನು ಗಮನಿಸಿ, ಹಿಂದಿನ ಕ್ರಮದಂತೆ ಆಚಾರ್ಯ ಪದವಿಯನ್ನು ತಮ್ಮ ಮುಖ್ಯ ಶಿಷ್ಯರಲ್ಲಿ ಒಬ್ಬರಿಗೇ ವಹಿಸದೆ, ನಾಡಿನಾದ್ಯಂತ 74 ಮಠ ಪೀಠಗಳನ್ನು ಸ್ಥಾಪಿಸಿ, ಅವುಗಳ ನಿರ್ವಹಣೆಗೆ ಸಿಂಹಾಸನಾಧಿಪತಿಗಳನ್ನು ನೇಮಿಸಿದರು.

ರಾಮಾನುಜಾರ್ಯಾಚ್ಛ್ರುತಿ ಮೌಳಿ ಭಾಷ್ಯಂ
ಅರ್ಥಂ ರಹಸ್ಯಂ ದ್ರಮಿಡ ಶ್ರುತೀನಾಂ ।
ಸಂಪ್ರಾಪ್ಯ ತೇಷ್ವೈವ ಗುರೂಕೃತಾಂಸ್ತಾನ್
ಭಜೇಚತುಸ್ಸಪ್ತತಿ ಪೀಠ ಸಂಸ್ಥಾನ್ ॥

ಎಂಬಂತೆ ಈ ಪೀಠಾಧಿಪತಿಗಳಲ್ಲಿ ಕೆಲವರು ಶ್ರೀಭಾಷ್ಯ—ಗೀತಾಭಾಷ್ಯಗಳಿಗೆ, ಕೆಲವರು ರಹಸ್ಯ ಮಂತ್ರಾರ್ಥಕ್ಕೆ, ಇನ್ನು ಕೆಲವರು ಭಗವದ್ವಿಷಯವೆಂಬ ದಿವ್ಯ ಪ್ರಬಂಧಕ್ಕೆ ಪ್ರಾಧಾನ್ಯ ನೀಡಿದರು.

ರಾಮಾನುಜಸ್ಸಪ್ತಶತೈರ್ಯತೀನಾಂ
ಪೀಠೇಶ್ಚತುಸ್ಸಪ್ತತಿಭಿಸ್ಸಮೇತಃ ।
ಏಕಾಂತಿಭಿರ್ದ್ವಾದಶಭಿಸ್ಸಹಸ್ರೈಃ
ಶ್ರೀರಂಗ ಆಸ್ತೇ ಯತಿಸಾರ್ವಭೌಮಃ ॥

ಎಂಬಂತೆ ಈ ಪೀಠಾಧಿಪತಿಗಳಲ್ಲದೆ 700 ಜೀಯರ್‌ಗಳು, 12000 ಏಕಾಂತಿಗಳು, 3 ಕೋಟಿ ಅಮ್ಮೆೃಗಳು ಶ್ರೀವೈಷ್ಣವ ಸಿದ್ಧಾಂತದ ಪ್ರಚಾರದಲ್ಲಿ ನಿರತರಾಗುವಂತೆ ವ್ಯವಸ್ಥೆ ಮಾಡಿದರು.

ಪರಂಪರಾಗತವಾದ ಸತ್ಸಂಪ್ರದಾಯ ನಿಷ್ಠರೂ, ಸದಾಚಾರ ಸಂಪನ್ನರೂ, ತತ್ತ್ವಜ್ಞಾನಿಗಳೂ, ವಿವೇಕಿಗಳೂ, ದೈವಭಕ್ತರೂ, ಆದ ಈ ಮಠಾಧಿಪತಿಗಳ ಹಾಗೂ ಅವರ ಶಿಷ್ಯರ ಖಂಡನ, ಮಂಡನ, ಪರೀಕ್ಷಣ, ವಿಮರ್ಶನಗಳಿಂದ ರಾಮಾನುಜ ಸಿದ್ಧಾಂತಕ್ಕೆ ನಿಷ್ಕೃಷ್ಟತೆ, ವೈಶಾಲ್ಯತೆಗಳುಂಟಾಗಿ ಅದು ಬಹು ಬೇಗ ಹರಡಿತು.

# ಅಧ್ಯಾಯ ೫ = ನಿಗಮಾಂತ ಮಹಾದೇಶಿಕ (1268-1369)

ರಾಮಾನುಜದಯಾಪಾತ್ರಂ ಜ್ಞಾನವೈರಾಗ್ಯ ಭೂಷಣಂ ।
ಶ್ರೀಮದ್ವೇಂಕಟನಾಥಾರ್ಯಂ ವಂದೇ ವೇದಾಂತ ದೇಶಿಕಂ ॥೧॥
ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ ।
ವೇದಾಂತಾಚಾರ್ಯ ವರ್ಯೋಮೇ ಸನ್ನಿಧತ್ತಾಂ ಸದಾಹೃದಿ ॥೨॥

ರಾಮಾನುಜರ ಕಾಲದಿಂದಲೇ ಅವರ ಶಿಷ್ಯರಲ್ಲಿ ಎರಡು ಪ್ರಭೇದ ಅಥವಾ ಸಂಪ್ರದಾಯಗಳು ಬೆಳೆದು ಬರತೊಡಗಿದುವು. ರಾಮಾನುಜರ ಪಾದ ಗಳನ್ನು ಆಶ್ರಯಿಸಿ, ಅವರ ಜ್ಞಾನಪುತ್ರರೆಂದು ವಿಖ್ಯಾತರಾದ ಪಿಳ್ಳಾನ್, ವಿಷ್ಣುಚಿತ್ತ, ವಾತ್ಸ್ಯವರದಾಚಾರ್ಯ, ಆತ್ರೇಯ ರಾಮಾನುಜ ಮುಂತಾದ ವರು, ಸಂಸ್ಕೃತವೇದ, ಶ್ರೀಭಾಷ್ಯ, ಘಂಟಾನಾದ, ವೈದಿಕಕರ್ಮ ಮತ್ತು

ಉಪಾಸನೆ –ಇವುಗಳಿಗೆ ಪ್ರಾಮುಖ್ಯ ನೀಡಿ. ವಡಗಲೆ ಸಂಪ್ರದಾಯದವರು ಎನಿಸಿದರು ; ರಾಮಾನುಜರ ಅತ್ಯಂತ ಪ್ರಿಯ ಶಿಷ್ಯರಾದ ಕೂರತ್ತಾಳ್ವಾನ್, ಎಂಬಾರ್, ಪರಾಶರಭಟ್ಟ, ನಂಜೀಯರ್, ನಂಪಿಳ್ಳೈ, ಪೆರಿಯವಾಚ್ಚಾನ್ ಪಿಳ್ಳೈ, ವಡಕುತ್ತಿರುವೀಧಿಪಿಳ್ಳೈ, ಪಿಳ್ಳೈಲೋಕಾಚಾರ್ಯ, ತಿರುವಾಯ್ಮೊಳಿ ಪಿಳ್ಳೈ ಮುಂತಾದವರು, ತಮಿಳು ಪ್ರಬಂಧ, ಆಗಮಗಳಿಗನುಸಾರವಾದ ದೇವತಾರ್ಚನೆ, ಪ್ರಪತ್ತಿ ಇವುಗಳಿಗೆ ಪ್ರಾಮುಖ್ಯ ನೀಡಿ ತೆಂಗಲೆ ಸಂಪ್ರದಾಯ ದವರೆನಿಸಿದರು. ಈ ಎರಡು ಪಂಗಡಗಳಲ್ಲಿ ಭಿನ್ನಾಭಿಪ್ರಾಯವು ತಲೆದೋರಿ ದ್ವೇಷಾಸೂಯೆಗೆ ಅವಕಾಶವಿದ್ದುದರಿಂದ, ಪರಮತೀಯರು ವಿಶಿಷ್ಟಾದ್ವೈತ ವನ್ನು ಹೀಗಳೆದು ತಮ್ಮ ಮತವನ್ನು ಪ್ರಚಾರ ಮಾಡುತ್ತಿದ್ದರು. ಇಂತಹ ಸಂಧಿ ಕಾಲದಲ್ಲಿ ನಿಗಮಾಂತ ಮಹಾದೇಶಿಕರು ಅವತರಿಸಿ ಶ್ರೀವೈಷ್ಣವ ಧರ್ಮ ವನ್ನು ಉನ್ನತಿಗೇರಿಸಲು ಬಹಳವಾಗಿ ಶ್ರಮಿಸಿ, ಸಂಸ್ಕೃತವೇದ, ತಮಿಳು ಪ್ರಬಂಧ ಎರಡರಲ್ಲಿಯೂ ಅದ್ಭುತ ಪಾಂಡಿತ್ಯವನ್ನು ಪಡೆದು, ಗ್ರಂಥ-ಸ್ತೋತ್ರ ಗಳನ್ನು ರಚಿಸಿ, ಪರಮತ ಭಂಗಮಾಡಿ, ವಿಶಿಷ್ಟಾದ್ವೈತ ವೇದಾಂತವನ್ನು ಊರ್ಜಿತಗೊಳಿಸಿದರು.

ನಾಥಮುನಿ, ಯಾಮುನಮುನಿ, ರಾಮಾನುಜಮುನಿ ಎಂಬ ಮುನಿ ತ್ರಯರು ರೂಪಿಸಿ ಬೆಳೆಸಿದ ವಿಶಿಷ್ಟಾದ್ವೈತ ಸಿದ್ಧಾಂತದ ರಕ್ಷಣೆ, ವ್ಯವಸ್ಥೆ, ಪ್ರವಚನ, ಪ್ರಚಾರಗಳಿಗಾಗಿ ತಮ್ಮ ಇಡೀ ಜೀವನವನ್ನೇ ಮುಡುಪಾಗಿಟ್ಟ ಮಹಾತ್ಮರು ವೇದಾಂತ ದೇಶಿಕರು.

ರಾಮಾನುಜರಿಂದ ನೇಮಿಸಲ್ಪಟ್ಟ 74 ಸಿಂಹಾಸನಾಧಿಪತಿಗಳಲ್ಲಿ ಒಬ್ಬರೂ, ಸುಪ್ರಸಿದ್ಧ ವಿದ್ವಾಂಸರೂ ಆದ ಪುಂಡರೀಕಾಕ್ಷರ ಮಗನಾದ ಅನಂತ ಸೂರಿಗಳು ವೇದಾಂತದೇಶಿಕರ ತಂದೆ ; ಹಾಗೆಯೇ ಸಿಂಹಾಸನಾಧಿಪತಿಗಳಾಗಿದ್ದ ಆತ್ರೇಯ ರಾಮಾನುಜರ ಸೋದರಿ ತೋತಾರಮ್ಮ ಇವರ ತಾಯಿ ಇಂತಹ ಶ್ರೇಷ್ಠ ಶ್ರೀವೈಷ್ಣವ ವಂಶದಲ್ಲಿ, ತಿರುಪತಿಯ ದೇವಾಲಯದ ಘಂಟೆಯ ಅವತಾರವೆನಿಸಿದ ವೆಂಕಟನಾಥ ಅಥವಾ ತೂಪ್ಪಿಲ್ ಪಿಳ್ಳೈಯವರು, ವೇದಾಂತ ದೇಶಿಕ, ನಿಗಮಾಂತ ಮಹಾದೇಶಿಕ ಎಂದೇ ಪ್ರಸಿದ್ಧಿಯಾಗಿದ್ದಾರೆ.

ದೇವರಲ್ಲಿ ಭಕ್ತಿ, ಜ್ಞಾನದಲ್ಲಿ ಆಸಕ್ತಿ, ಅಹಂಕಾರವಿಲ್ಲದ ಪ್ರೀತಿಯು ಹೃದಯ, ಹಣ ಗೌರವ ಅಧಿಕಾರಗಳಲ್ಲಿ ನಿರಾಸಕ್ತಿ, ಹಮ್ಮುಬಿಮ್ಮು ಇಲ್ಲದ ಕರ್ತವ್ಯ ನಿಷ್ಠೆ, ಪ್ರಾಮಾಣಿಕತೆ, ಗುರಿ ಸಾಧಿಸುವುದರಲ್ಲಿದ್ದ ಏಕಾಗ್ರತೆ, ಕ್ಷಮೆ, ಗುರುಹಿರಿಯರಲ್ಲಿ ವಿಧೇಯತೆ –ಇವೆಲ್ಲವೂ ವೆಂಕಟನಾಥನಿಗೆ ವಂಶ ಪಾರಂಪರ್ಯವಾಗಿ ಬಂದಿದ್ದ ಕೊಡುಗೆಗಳು. ಅವರು ತಮ್ಮ ಪರಿಶ್ರಮದಿಂದ ಇವೆಲ್ಲವನ್ನೂ ಮತ್ತಷ್ಟು ಅಭಿವೃದ್ಧಿಪಡಿಸಿಕೊಂಡರು. "ಸರಳ ಜೀವನ ಹಾಗೂ ಉದಾತ್ತ ಚಿಂತನ" ಎಂಬ ಭಾರತೀಯ ಸಂಸ್ಕೃತಿಯ ತಿರುಳು ಇವರ ಜೀವನದ ಉಸಿರಾಗಿದ್ದು, "ವಚಸ್ಯೇಕಂ ಮನಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ" ಎಂಬ ಉಕ್ತಿ ಇವರಿಗೆ ನಿಜವಾಗಿಯೂ ಅನ್ವಯಿಸುತ್ತಿದ್ದಿತು.

ಅದ್ಭುತ ಜ್ಞಾಪಕಶಕ್ತಿ, ತೀರ್ವ ವಿಮರ್ಶಕ ಬುದ್ಧಿ, ಆಳ ಹಾಗೂ ವಿಸ್ತಾರ ಆದ ಜ್ಞಾನ, ಮೇರೆ ಇಲ್ಲದ ಕವಿತಾಸಾಮರ್ಥ್ಯ, ಅತ್ಯುನ್ನತ ಮಟ್ಟದ ಕ್ರಿಯಾಶಕ್ತಿ, ತರ್ಕದಲ್ಲಿನ ಶ್ರೇಷ್ಠ ಪಾಂಡಿತ್ಯ, ಶಾಸ್ತ್ರವಾದದಲ್ಲಿನ ತೀವ್ರ ಆಸಕ್ತಿ, ಶಾಸ್ತ್ರಗಳ ವ್ಯಾಖ್ಯಾನದಲ್ಲಿನ ಮೂಲಗಾಮಿಶಕ್ತಿ –ಇವೆಲ್ಲ ಮೇಳಯಿಸಿದ್ದ ವೆಂಕಟನಾಥರಿಗೆ, ಕವಿತಾರ್ಕಿಕಸಿಂಹ, ಸರ್ವತಂತ್ರ ಸ್ವತಂತ್ರ, ನಿಗಮಾಂತ ಮಹಾದೇಶಿಕ ಎಂಬ ಬಿರುದುಗಳು ಉಚಿತವೆನಿಸಿದುವು. ಇವರು ಪೂರ್ವಾಚಾರ್ಯರಿಂದ ಹರಿದುಬಂದ ಜ್ಞಾನಾನುಭವಗಳ ಪ್ರವಾಹಕ್ಕೆ ತಮ್ಮದನ್ನೂ ಸೇರಿಸಿ ಹಿಗ್ಗಿಸಿ, ವಿಶಿಷ್ಟಾದ್ವೈತ ತತ್ತ್ವ ಹಾಗೂ ಶ್ರೀವೈಷ್ಣವ ಮತಗಳನ್ನು ಬಹುದೂರದವರೆಗೆ ಹರಡಿದರು

ತಮ್ಮ ಗುರುಗಳಾದ ನಡಾದೂರಮ್ಮಾಳ್ ಅಥವಾ ವಾತ್ಸ್ಯ ವರದಾಚಾರ್ಯರ ಅದೇಶದಂತೆ, ಆತ್ರೇಯ ರಾಮಾನುಜರು ತಮಗೆ ಎರಡು ಪರಂಪರೆಗಳಿಂದಲೂ ದೊರೆತಿದ್ದ ರಹಸ್ಯ ಮಂತ್ರಾರ್ಥ ಮತ್ತು ಭಗವದ್ವಿಷಯಗಳನ್ನು, ಸಾಮಾನ್ಯ ಶಾಸ್ತ್ರಗಳೊಂದಿಗೆ, ತೂಪ್ಪಿಲ್ ಪಿಳ್ಳೈಯವರಿಗೆ ಕಲಿಸಿದರು. ಇವೆಲ್ಲವನ್ನೂ ಶ್ರದ್ಧಾಸಕ್ತಿಗಳಿಂದ ಕಲಿತ ವೆಂಕಟನಾಥರು, ಮಿಶ್ರವಿಲ್ಲದ, ಶುದ್ಧವಾದ, ಉಭಯ ವೇದಾಂತ ಪ್ರವರ್ತನಾಚಾರ್ಯರಾಗಲು ಅನುಕೂಲವಾಯಿತು.

ಸೋದರಮಾವನಿಂದ ಉಪದೇಶಿಸಲ್ಪಟ್ಟ ವೈನತೇಯ ಅಥವಾ ಗರುಡ ಮಂತ್ರವನ್ನು, ತಿರುವಹೀಂದ್ರಪುರದ ಬಳಿ ಇರುವ ಔಷಧಾದ್ರಿಯಲ್ಲಿ ಪುನಶ್ಚರಣೆ ಮಾಡಿ ಗರುಡನನ್ನು ಒಲಿಸಿಕೊಂಡು, ಅವನ ಸಹಾಯದಿಂದ ಕಲಿತ ಹಯಗ್ರೀವ ಮಂತ್ರವನ್ನು ಪುನಶ್ಚರಣೆ ಮಾಡಿ, ಶ್ರೀಲಕ್ಷ್ಮೀಹಯಗ್ರೀವಸ್ವಾಮಿಯನ್ನು ಒಲಿಸಿಕೊಂಡು, ಅವನ ಕಟಾಕ್ಷಕ್ಕೆ ಪಾತ್ರರಾದರು. ಜೊತೆಗೆ ಇವರ ತಾತ ಪುಂಡರೀಕಾಕ್ಷರಿಗೆ, ತಿರುಕ್ಕುರುಗೈಪ್ಪಿರಾನ್ ಪಿಳ್ಳಾನ್‌ರವರಿಂದ ದೊರೆತ, ಶ್ರೀಲಕ್ಷ್ಮೀ ಹಯವದನನ ದಿವ್ಯ ಮಂಗಳ ಮೂರ್ತಿಯು ಇವರಿಗೆ ದೊರಕಿತು. (ಅದು ಇವರ ಶಿಷ್ಯರು ಸ್ಥಾಪಿಸಿದ ಪರಕಾಲ ಮಠದಲ್ಲಿದೆ.) ಇದರ ಫಲವಾಗಿ ವೇದಾಂತ ದೇಶಿಕರಿಗೆ ಸರ್ವ ವಿದ್ಯೆಗಳಲ್ಲಿಯೂ ಪ್ರಭುತ್ವ ಬಂದಿತು.

ಆತ್ರೇಯ ರಾಮಾನುಜರೇ ಅಲ್ಲದೆ ಅವರ ಶಿಷ್ಯ ಶ್ರೀರಂಗರಾಜರೂ ವೇದಾಂತ ದೇಶಿಕರ ಗುರುಗಳಾಗಿದ್ದರು. ಇವರ ಹಿರಿಯ ಸಮಕಾಲೀನರಾಗಿದ್ದ ವಾತ್ಸ್ಯವರದಾಚಾರ್ಯ, ಸುದರ್ಶನಾಚಾರ್ಯ, ವಡಕ್ಕುತ್ತಿರುವೀಧಿ ಪಿಳ್ಳೈ—ಈ ಮೂವರೂ ವೇದಾಂತ ದೇಶಿಕರ ಅಸಾಮಾನ್ಯ ಪ್ರತಿಭೆಯನ್ನು ಅವರ ಬಾಲ್ಯದಲ್ಲಿಯೇ ಗುರುತಿಸಿ ಮೆಚ್ಚುಗೆಯನ್ನು ಸೂಚಿಸಿದ್ದರು. ರಾಮಾನುಜ ದರ್ಶನದ ಪ್ರವಚನ–ಪ್ರಚಾರಗಳೇ ತಮ್ಮ ಜೀವನದ ಮುಖ್ಯ ಗುರಿ ಎಂದು ತಿಳಿದಿದ್ದ ವೇದಾಂತ ದೇಶಿಕರು, ತಮ್ಮ 20ನೆಯ ವರ್ಷದ ವೇಳೆಗೆ ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಮೀಮಾಂಸ, ಚಾರ್ವಾಕ, ಬೌದ್ಧ, ಜೈನ, ಶೈವ, ಶಾಂಕರ, ಭಾಸ್ಕರ–ದರ್ಶನಗಳೆಲ್ಲವನ್ನೂ ಚೆನ್ನಾಗಿ ಪರಿಚಯ ಮಾಡಿಕೊಂಡಿದ್ದರು. ಜ್ಯೋತಿಷ, ಛಂದಸ್ಸು, ಶಬ್ದಶಾಸ್ತ್ರ, ಕಾವ್ಯ, ಅಲಂಕಾರ, ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ, ಆಗಮಗಳಲ್ಲಿಯೂ ಅತಿಶಯ ಪಾಂಡಿತ್ಯವನ್ನು ಹೊಂದಿದ್ದರು. ಉತ್ತರಮೀಮಾಂಸೆ ಮತ್ತು ಶ್ರೀಭಾಷ್ಯ ಮುಂತಾದ ಸಂಪ್ರದಾಯ ಗ್ರಂಥಗಳಲ್ಲಿ ಅದ್ವಿತೀಯ ಪಾಂಡಿತ್ಯವಿದ್ದಿತು.

ಕಂಚಿಯ ಗುರು ಪೀಠದ ಸಿಂಹಾಸನಾಧಿಪತಿಗಳಾಗಬೇಕಾಗಿದ್ದ ದೇಶಿಕರು, ಬಾಲ್ಯದಿಂದಲೇ ವಿಶಿಷ್ಟಾದ್ವೈತ ಸಿದ್ಧಾಂತ ಸಾಹಿತ್ಯವನ್ನೂ ವ್ಯಾಸಂಗ ಮಾಡತೊಡಗಿದರು. ನಾಥಮುನಿಗಳ ನ್ಯಾಯತತ್ತ್ವ, ಯಾಮುನರ ಸಿದ್ಧಿತ್ರಯ,

ಪರಾಶರಭಟ್ಟರ ತತ್ತ್ವರತ್ನಾಕರ, ವಾತ್ಸ್ಯವರದಾಚಾರ್ಯರ ತತ್ತ್ವಸಾರ, ಆತ್ರೇಯ ರಾಮಾನುಜರ ನ್ಯಾಯಕುಲಿಶ, ನಾರಾಯಣಾಚಾರ್ಯರ ಮೀಮಾಂಸಾ ಸೂತ್ರ ವಿವರಣ, ವರದವಿಷ್ಣುಮಿಶ್ರರ ಮಾನಯಾಥಾತ್ಮ್ಯ ನಿರ್ಣಯ– ಈ ಗ್ರಂಥಗಳನ್ನೆಲ್ಲ ದೇಶಿಕರು ಓದಿದರು. ಸಂಸ್ಕೃತದ ಜೊತೆಗೇ ತಮಿಳನ್ನೂ ಚೆನ್ನಾಗಿ ಅಧ್ಯಯನ ಮಾಡಿ, ನಮ್ಮಾಳ್ವಾರರ ಗೀತೆಗಳನ್ನು ಕಂಠಸ್ಥವನ್ನಾಗಿ ಮಾಡಿಕೊಂಡರು. ಹೀಗೆ ದೇಶಿಕರು ಉಭಯ ವೇದಾಂತದಲ್ಲಿ ಪೂರ್ಣ ನಿಷ್ಣಾತರಾಗಿದ್ದರು.

ವೇದಾಂತ ದೇಶಿಕರು ಸಂದರ್ಶಿಸದ, ಸಾಕ್ಷಾತ್ಕರಿಸದ, ಸ್ಮರಿಸದ, ದಿವ್ಯ ದೇಶಗಳು ಹಾಗೂ ದೇವಮೂರ್ತಿಗಳು ಇಲ್ಲವೆನ್ನಬಹುದು. ತಿರುಪತಿ, ಶ್ರೀಪೆರಂಬೂದೂರು, ಶ್ರೀರಂಗ, ತಿರುನಾರಾಯಣಪುರ, ತಿರುವನಂತಪುರ, ತಿರುವಹೀಂದ್ರಪುರ, ಪ್ರಯಾಗ, ಕಾಶಿ, ಆಯೋಧ್ಯೆ, ಹರಿದ್ವಾರ, ಬದರಿಕಾ ಶ್ರಮ, ದ್ವಾರಕೆ, ಮಥುರ, ಮೊದಲಾದ ದಿವ್ಯ ಕ್ಷೇತ್ರಗಳನ್ನೂ, ಅಲ್ಲಿನ ದೇವಾಲಯಗಳನ್ನೂ ಸಂದರ್ಶಿಸಿ, ಈ ದೇವಮೂರ್ತಿಗಳನ್ನು ಕುರಿತು, ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ, ಎಲ್ಲ ಕಾಲದ ಎಲ್ಲ ಜನರಿಗೂ ಉಪ ಯೋಗವಾಗುವಂತಹ ನೂರಾರು ಸ್ತೋತ್ರ ಗ್ರಂಥಗಳನ್ನು ರಚಿಸಿದ್ದಾರೆ. ತಮ್ಮ ಲೋಕೋತ್ತರವಾದ ಭಕ್ತಿಯಿಂದ ಶ್ರೀಮನ್ನಾರಾಯಣನ ಗುಣವಿಭವ ರೂಪ ಮಹಿಮಾದಿಗಳನ್ನು ತಮ್ಮ ಸ್ತೋತ್ರಗಳಲ್ಲಿ ಮನದಣಿಯೆ ಸ್ತುತಿಸಿ ಕೊಂಡಾಡಿದ್ದಾರೆ ಹಾಗೂ ಸಿದ್ಧಾಂತದ ಸಾರವನ್ನು ಇವುಗಳಲ್ಲಿ ಭಟ್ಟಿ ಇಳಿ ಸಿದ್ದಾರೆ. ಹೀಗೆ ಕವಿತೆ ಮತ್ತು ತತ್ತ್ವಶಾಸ್ತ್ರಗಳೆರಡನ್ನೂ ಅಂದವಾಗಿ ಜೋಡಿಸಿ, ಶ್ರೇಷ್ಠ ವ್ಯಕ್ತಿಗಳೆನಿಸಿದ ದೇಶಿಕರು, ತಮ್ಮ ಶಾಸ್ತ್ರ ಪಾಂಡಿತ್ಯ ಹಾಗೂ ಕವಿತಾ ಶಕ್ತಿಗಳನ್ನು ಕೇವಲ ವೇದಾಂತದ ಪ್ರತಿಷ್ಠಾಪನೆಗಾಗಿ ಮಾತ್ರ ಉಪಯೋಗಿಸಿದ್ದಾರೆ

ಒಂದೇ ಜಗತ್ಕಾರಣ ವಸ್ತುವನ್ನು ಪ್ರತಿಪಾದಿಸುವ ತತ್ತ್ವಗಳನ್ನು ತಿಳಿದುಕೊಳ್ಳಬೇಕೆನ್ನುವವರ ಅಜ್ಞಾನ, ಸಂಶಯ ಮುಂತಾದ ದೋಷಗಳು ನಿವಾರಣೆಯಾಗಲು, ಶಾಸ್ತ್ರಗಳೆಲ್ಲವೂ ಸಹಾಯಕ ಆಗಿರಬೇಕೇ ಹೊರತು, ಆ

ತತ್ತ್ವಗಳನ್ನು ತಳ್ಳಿ ಹಾಕುವ ಅಥವಾ ಬದಲಾಯಿಸುವ ಸ್ವಾತಂತ್ರ್ಯವನ್ನು ಶಾಸ್ತ್ರಗಳು ಹೊಂದಿರಬಾರದು–ಎಂಬುದು ದೇಶಿಕರ ಅಭಿಪ್ರಾಯ. ಅವರು ತಮ್ಮ ಗ್ರಂಥಗಳಲ್ಲಿ, ಪ್ರಾಚೀನ ಶಾಸ್ತ್ರಕಾರರು ಮತ್ತು ಆಚಾರ್ಯರನ್ನೂ ಅವರು ರಚಿಸಿದ ಕ್ಲಿಷ್ಟವಾದ ಗ್ರಂಥಗಳ ಸ್ವರೂಪವನ್ನೂ ಸೂಕ್ತ ರೀತಿಯಲ್ಲಿ ವಿಶದಪಡಿಸಿ, ಮುಂದಿನ ಜನಾಂಗಕ್ಕೆ ಮಹದುಪಕಾರ ಮಾಡಿದುದಲ್ಲದೆ, ಪಾಂಡಿತ್ಯದಿಂದ ಕೂಡಿದ ಸರ್ವತೋಮುಖವಾದ ಗ್ರಂಥ ರಚನಾ ಸಾಮರ್ಥ್ಯಕ್ಕೆ ಮಾರ್ಗದರ್ಶಕರೆನಿಸಿದ್ದಾರೆ.

ಬಾಲ್ಯದಲ್ಲಿ ರಾಮಾನುಜಾಚಾರ್ಯರ ಗ್ರಂಥಗಳನ್ನು ಆಳವಾಗಿ ಭಕ್ತಿ ಪ್ರೇಮಗಳಿಂದ ಓದಿದ್ದುದರಿಂದಲೇ ತಮಗೆ ರಚನಾ ಸಾಮರ್ಥ್ಯವು ಬಂದಿತೆಂದು ಹೇಳಿ, ಆ ಕೃತಿಗಳನ್ನು ಕೊಂಡಾಡಿದ್ದಾರೆ, ಸಂಸ್ಕೃತ, ತಮಿಳು, ಮತ್ತು ಇವೆರಡರ ಮಿಶ್ರ ಆದ ಮಣಿಪ್ರವಾಳ ಭಾಷೆಗಳಲ್ಲಿರುವ ದೇಶಿಕರ ಗ್ರಂಥ ರತ್ನಗಳು ನೂರಕ್ಕಿಂತ ಹೆಚ್ಚು ಸಂಖ್ಯೆಯಲ್ಲಿವೆ.

1) ನ್ಯಾಸದಶಕ, ನ್ಯಾಸವಿಂಶತಿ, ವೈರಾಗ್ಯ ಪಂಚಕ, ಹರಿದಿನ ತಿಲಕ, ಯಜ್ಞೋಪವೀತ ಪ್ರತಿಷ್ಠೆ, ವೈಶ್ವದೇವಕಾರಿಕೆ, ಶ್ರೀವೈಷ್ಣವ ದಿನಚರಿ, ಅರ್ಥ ಪಂಚಕ. ಪನ್ನೀರುನಾಮ, ಆಹಾರ ನಿಯಮ, ತಿರುಮಂತ್ರ ಚ್ಚುರುಕ್ಕು, ದ್ವಯಚ್ಚುರುಕ್ಕು, ಚರಮ ಶ್ಲೋಕಚ್ಚುರುಕ್ಕು, ತತ್ತ್ವನವನೀತ, ರಹಸ್ಯನವನೀತ, ಉಪಕಾರ ಸಂಗ್ರಹ, ಸಾರ ಸಂಗ್ರಹ, ಮುನಿವಾಹನಭೋಗ, ಮಧುರ ಕವಿ ಹೃದಯ, ತತ್ತ್ವತ್ರಯ ಚುಳುಕ, ರಹಸ್ಯತ್ರಯಚುಳುಕ, ಸಾರದೀಪ, ನಿಗಮ ಪರಿಮಳ, ಗುರು ಪರಂಪರಾಸಾರ, ಅದೈಕ್ಕಲಪ್ಪತ್ತು, ತಿರುಚ್ಚಿನ್ನಮಾಲೆ, ರಹಸ್ಯಶಿಖಾಮಣಿ, ಅಭಯ ಪ್ರದಾನಸಾರ, ಸಾರಸಾರ, ಪ್ರಧಾನಶತಕ, ರಹಸ್ಯರತ್ನಾವಲಿ, ರಹಸ್ಯ ರತ್ನಾವಳಿ ಹೃದಯ, ತತ್ತ್ವ ರತ್ನಾವಲಿ, ಪ್ರತಿಪಾದ್ಯ ಸಂಗ್ರಹ, ರಹಸ್ಯ ಸಂದೇಶ ವಿವರಣೆ, ರಹಸ್ಯ ಸಂದೇಶ, ತತ್ತ್ವ ಸಂದೇಶ, ರಹಸ್ಯ ಮಾತೃಕ, ತತ್ತ್ವ ಮಾತೃಕ, ರಹಸ್ಯ ಪದವಿ, ತತ್ತ್ವ ಪದವಿ, ಸಂಪ್ರದಾಯ ಪರಿಶುದ್ಧಿ, ಆರಾಧನ ಕಾರಿಕೆ, ಪ್ರಬಂಧಸಾರ, ಹಸ್ತಿಗಿರಿ ಮಹಾತ್ಮ್ಯ, ಪರಮ ಪದಸೋಪಾನ, ಅಮೃತ

ರಂಜಿನಿ, ಅಧಿಕಾರ ಸಂಗ್ರಹ, ಅಮೃತಾಸ್ವಾದಿನಿ, ನವರತ್ನಮಾಲೆ, ಗೀತಾರ್ಥ ಸಂಗ್ರಹ, ಅಂಜಲಿ ವೈಭವ—ಇವು ಶ್ರೀವೈಷ್ಣವ ತತ್ತ್ವದ ಕಲ್ಪನೆ ಮತ್ತು ಆದರ್ಶಗಳನ್ನು ಲೋಕಮಾನ್ಯವಾಗುವಂತೆ ಮಾಡಲು, ಹಾಗೂ ಆಳ್ವಾರಾಚಾರ್ಯರುಗಳು ಸಾರಿದ ಧರ್ಮ-ತತ್ತ್ವಗಳನ್ನು ರಕ್ಷಿಸಿ, ವಿಶದೀಕರಿಸಿ, ಪ್ರಚಾರ ಮಾಡುವ ಸಲುವಾಗಿ ರಚಿಸಲ್ಪಟ್ಟುವು.

2) ನಿಕ್ಷೇಪರಕ್ಷೆ, ಪಾಂಚರಾತ್ರರಕ್ಷೆ, ಸಚ್ಚರಿತ್ರರಕ್ಷೆ, ದ್ರಮಿಡೋಪನಿಷತ್ಸಾರ, ದ್ರಮಿಡೋಪನಿಷತ್ತಾತ್ಪರ್ಯ ರತ್ನಾವಳಿ, ರಹಸ್ಯತ್ರಯಸಾರ, ಭೂಗೋಳ ನಿರ್ಣಯ, ಶಿಲ್ಪಾರ್ಥಸಾರ—ಇವುಗಳಲ್ಲಿ ರಾಮಾನುಜ ಸಂಪ್ರದಾಯದ ಮಹತ್ವ ಮತ್ತು ತತ್ತ್ವಗಳ ನಿರೂಪಣೆಯನ್ನು ಬಹು ಚೆನ್ನಾಗಿ, ಸುಂದರವಾಗಿ ವಿವರಿಸಲಾಗಿದೆ. ಮುಖ್ಯವಾಗಿ ತಿರುವಾಯ್ಮೊಳಿಯ ಪೂರ್ಣ ಸಾರವನ್ನು ಸಂಸ್ಕೃತ ಶ್ಲೋಕಗಳ ಮೂಲಕ ದ್ರಮಿಡೋಪನಿಷತ್ಸಾರದಲ್ಲಿ ಹೇಳಿದ್ದಾರೆ. ಅಮೋಘ ಗ್ರಂಥವೆನಿಸಿದ ರಹಸ್ಯತ್ರಯ ಸಾರದಲ್ಲಿ ವೇದ ವೇದಾಂತ ವಿಷಯಗಳ ಸಾರವನ್ನೂ, ಶ್ರೀವೈಷ್ಣವ ಸಿದ್ಧಾಂತದ ಪ್ರಮುಖ ವಿಷಯವನ್ನೂ ಅತಿ ಸ್ವಾರಸ್ಯವಾಗಿ ವಿಶದ ಪಡಿಸಿದ್ದಾರೆ.

3) ಹಯಗ್ರೀವ ಸ್ತೋತ್ರ, ದಶಾವತಾರ ಸ್ತೋತ್ರ, ದೇವನಾಯಕ ಪಂಚಾಶತ್, ಭಗವದ್ಧ್ಯಾನ ಸೋಪಾನ, ಗೋಪಾಲವಿಂಶತಿ, ಭೂಸ್ತುತಿ, ಶ್ರೀಸ್ತುತಿ, ಅಭೀತಿಸ್ತವ, ವರದರಾಜ ಪಂಚಾಶತ್, ವೇಗಾಸೇತು ಸ್ತೋತ್ರ, ಯಥೋಕ್ತಕಾರಿ ಸ್ತೋತ್ರ, ಅಷ್ಟಭುಜಾಷ್ಟಕ, ಕಾಮಾಸಿಕಾಷ್ಟಕ, ಪರಮಾರ್ಥ ಸ್ತುತಿ, ಶರಣಾಗತಿದೀಪಿಕೆ, ಅಚ್ಯುತಶತಕ, ದೆಹಲೀಶ ಸ್ತೋತ್ರ, ನ್ಯಾಸತಿಲಕ, ರಘುವೀರಗದ್ಯ, ಷೋಡಶಾಯುಧ ಸ್ತೋತ್ರ, ಸುದರ್ಶನಾಷ್ಟಕ, ಗರುಡ ದಂಡಕ, ಗರುಡ ಪಂಚಾಶತ್, ಯತಿರಾಜ ಸಪ್ತತಿ, ದಿವ್ಯದೇಶ ಮಂಗಳಾ ಶಾಸನ ಪಂಚಕ, ಧಾಟೀ ಪಂಚಕ, ಪಾದುಕಾಸಹಸ್ರ, ಸುಭಾಷಿತ ನೀವಿ, ಇವು ದಿವ್ಯ ದೇಶಗಳಲ್ಲಿ ಆರಾಧಿಸಲ್ಪಡುತ್ತಿರುವ ಪರಮಾತ್ಮನ ದಿವ್ಯ ಮಂಗಳ ವಿಗ್ರಹಗಳ ಪರವಾದ ಸ್ತೋತ್ರಗಳು. ಇವುಗಳಲ್ಲಿ ಭಗವಂತ, ಲಕ್ಷ್ಮೀ,

ಭೂದೇವಿ, ಭಗವಂತನ ಪರಿಜನರಾದ ಸುದರ್ಶನ, ವೈನತೇಯ, ನಮ್ಮಾಳ್ವಾರ್, ರಾಮಾನುಜ ಮೊದಲಾದವರನ್ನು ಸ್ತುತಿಸಲಾಗಿದೆ. ವೇದಾಂತ ವಿಷಯವನ್ನು ಪ್ರತಿಪಾದನ ಮಾಡುವ ಹಾಗೂ ಭಕ್ತಿಯನ್ನು ಪ್ರಚೋದಿಸುವ ಈ ಸ್ತೋತ್ರಗಳಿಗೆ ಸಾಹಿತ್ಯ ಪ್ರಪಂಚದಲ್ಲಿ ಉನ್ನತ ಮಟ್ಟದ ಸ್ಥಾನವಿದೆ.

4) ಯಾದವಾಭ್ಯುದಯ, ಸಂಕಲ್ಪ ಸೂರ್ಯೋದಯ, ಹಂಸ ಸಂದೇಶ, ದಯಾಶತಕ, ಗೋದಾಸ್ತುತಿ, ನೀಳಾಸ್ತುತಿ –ಇವು ತತ್ತ್ವಶಾಸ್ತ್ರವನ್ನು, ಕವಿತೆ ಹಾಗೂ ನಾಟಕ ರಚನಾ ಸಾಮರ್ಥ್ಯದ ಮೂಲಕ, ತಿಳಿಸಿ ಕೊಡುವ ಉತ್ತಮ ಉದಾಹರಣೆಗಳು.

5) ನ್ಯಾಯ ಪರಿಶುದ್ಧಿ, ನ್ಯಾಯ ಸಿದ್ಧಾಂಜನ, ತತ್ತ್ವಮುಕ್ತಾ ಕಲಾಪ, ಸರ್ವಾರ್ಥಸಿದ್ಧಿ, ಸೇಶ್ವರಮೀಮಾಂಸ, ಮೀಮಾಂಸಾಪಾದುಕ, ಅಧಿಕರಣ ಸಾರಾವಳಿ, ಪರಮತಭಂಗ, ಶತದೂಷಣಿ, ವಾದಿತ್ರಯ ಖಂಡನ, ಚಕಾರ ಸಮರ್ಥನ– ಇವು ಸ್ವತಂತ್ರ ದಾರ್ಶನಿಕ ಕೃತಿಗಳಾಗಿದ್ದು, ರಾಮಾನುಜ ದರ್ಶನದ ಸ್ಪಷ್ಟ ವಿವರಣೆಯನ್ನು ನೀಡುತ್ತವೆ.

6) ತತ್ತ್ವಟೀಕೆ. ತಾತ್ಪರ್ಯ ಚಂದ್ರಿಕೆ, ಗೀತಾರ್ಥ ಸಂಗ್ರಹ ರಕ್ಷೆ, ಸ್ತೋತ್ರರತ್ನ ಭಾಷ್ಯ, ಚತುಶ್ಲೋಕೀಭಾಷ್ಯ, ಗದ್ಯತ್ರಯಭಾಷ್ಯ, ಈಶಾವಾಸ್ಯೋಪನಿಷದ್ಭಾಷ್ಯ, ರಹಸ್ಯರಕ್ಷೆ –ಈ ವ್ಯಾಖ್ಯಾನ ಗ್ರಂಥಗಳು, ಮೂಲಗ್ರಂಥಗಳ ವೈಶಿಷ್ಟ್ಯತೆಗಳನ್ನು ಎತ್ತಿತೋರಿಸುವ, ವಿಮರ್ಶನಾತ್ಮಕ ಕೃತಿಗಳಾಗಿವೆ.

7) ರಸಭೌಮಾಮೃತ, ವೃಕ್ಷಭೌಮಾಮೃತ, ಕರಿಗಿರಿದಂಡಕ, ವೇದಾಂತ ಕೌಸ್ತುಭ, ದಶದೀಪಿಕ ನಿಘಂಟು, ಚಾಟುಧಾರಿ ಚಮತ್ಕಾರ ಕೋಶಮಂಜರಿ ಮುಂತಾದ ಇತರ ಕೆಲವು ಗ್ರಂಥಗಳನ್ನೂ ರಚಿಸಿದ್ದಾರೆಂದು ಹೇಳಲಾಗುತ್ತದೆ.

ಮೇಲಿನ ಈ ಗ್ರಂಥರಾಶಿಯನ್ನು ನೋಡಿದರೆ, ವೇದಾಂತ ದೇಶಿಕರು ಸದಾ ವಿಶಿಷ್ಟಾದ್ವೈತ ತತ್ತ್ವಚಿಂತನೆ, ಭಗವನ್ನಾಮಸ್ಮರಣೆ ಮತ್ತು ಕೃತಿರಚನೆ

ಗಳಲ್ಲಿಯೇ ತಮ್ಮ ಜೀವನವನ್ನು ಸವೆಸಿದ್ದಾರೆಂಬುದು ತಿಳಿದುಬರುತ್ತದೆ. ಹೀಗೆ ಭಾರತೀಯ ತತ್ತ್ವಶಾಸ್ತ್ರದ ಇತಿಹಾಸಕ್ಕೆ, ದೇಶಿಕರು ಅವಲೋಕನ, ಟೀಕೆ, ಪುನರುಜ್ಜೀವನ ಎಂಬ ಮೂರು ರೀತಿಯ ಸೇವೆಯನ್ನು ಸಲ್ಲಿಸಿದ್ದಾರೆ. ಗ್ರಂಥ ರಚನೆಯಲ್ಲೇ ಅಲ್ಲದೆ ವಾದದಲ್ಲಿಯೂ, ಮಂತ್ರತಂತ್ರಗಳಲ್ಲಿಯೂ ಅಸಾಧಾರಣ ಪ್ರೌಢಿಮೆ ಇದ್ದಿತು. ಇವರ ಪಾಂಡಿತ್ಯ, ವಾಕ್ಚಾತುರ್ಯ, ವಿನಯ, ವಿವೇಕ, ವಿರಕ್ತಿಗಳ ಬಗ್ಗೆ ಇವರ ವಿರೋಧಿಗಳೂ ಮೆಚ್ಚಿಹೊಗಳಿದ್ದಾರೆ ಅಪ್ಪಯ್ಯ ದೀಕ್ಷಿತ, ದೊಡ್ಡಯ್ಯಾಚಾರ್ಯ, ಪ್ರತಿವಾದಿ ಭಯಂಕರ ಅಣ್ಣಾನ್, ವೆಂಕಟಾಧ್ವರಿ ಎಲ್ಲರೂ ಇವರನ್ನು ಕೊಂಡಾಡಿದ್ದಾರೆ.

ವೇದವ್ಯಾಸರು ಸಂಸ್ಕೃತವೇದಗಳಿಗೆ ಮಾಡಿದಷ್ಟು ಸೇವೆಯು, ವೇದಾಂತ ದೇಶಿಕರಿಂದ ತಮಿಳು ಪ್ರಬಂಧಗಳಿಗೆ ದೊರೆತಿದೆ ಆಳ್ವಾರುಗಳು ತಮಿಳಿನಲ್ಲಿ ಹಾಡಿರುವುದನ್ನು, ತಮಿಳು ತಿಳಿಯದವರಿಗಾಗಿ ದೇಶಿಕರು ಸಂಸ್ಕೃತ ಶ್ಲೋಕಗಳಲ್ಲಿ ತಿಳಿಸಿದ್ದಾರೆ. ಆಚಾರ್ಯ ರಾಮಾನುಜರು ಉಪದೇಶಿಸಿದ ವಿಶ್ವಧರ್ಮವಾದ ಪ್ರಪತ್ತಿ, ಭರನ್ಯಾಸ, ಶರಣಾಗತಿ ಎನಿಸಿಕೊಳ್ಳುವ ಸಿದ್ಧಾಂತವನ್ನು, ಶಾಸ್ತ್ರ, ಸಂಪ್ರದಾಯ ಮತ್ತು ಅನುಷ್ಠಾನಗಳಿಗೆಲ್ಲ ಸರಿಹೊಂದುವಂತೆ, ತಮ್ಮ ಗ್ರಂಥಗಳ ಮೂಲಕ ಸಮರ್ಥಿಸಿ, ಪ್ರತಿಪಾದಿಸಿ, ಆ ಮೂಲಕ ವೇದಾಂತ ದೇಶಿಕರು ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಅತಿ ಮುಖ್ಯವಾದ ಕಾಣಿಕೆಯನ್ನು ನೀಡಿದ್ದಾರೆ ಹಾಗೂ ಭಾರತೀಯ ಧಾರ್ಮಿಕ ತತ್ತ್ವಗಳಿಗೆ ಅಮೋಘವಾದ ಕೊಡುಗೆಯನ್ನು ಸಲ್ಲಿಸಿದ್ದಾರೆ.

ಕಂಚಿಯ ಪೀಠಾಧಿಪತಿಗಳಾದ ದೇಶಿಕರು, ಕೆಲಕಾಲ ಶ್ರೀರಂಗದ ಪೀಠಕ್ಕೂ ಆಚಾರ್ಯರಾಗಿದ್ದರು. ಕೇವಲ ಕೆಲವೇ ಸಂಪ್ರದಾಯ ಭೇದದಿಂದ ವಡಗಲೆ–ತೆಂಗಲೆ ಎಂದು ಎರಡು ಕವಲಾಗಿ ಒಡೆದು ಹೋಗಿರುವ ರಾಮಾನುಜರ ಶಿಷ್ಯಮಂಡಲಿಯನ್ನು ಒಟ್ಟುಗೂಡಿಸಲು ತುಂಬಾ ಶ್ರಮಿಸಿದರು ತಮಿಳು, ಸಂಸ್ಕೃತ ಎರಡೂ ಭಾಷೆಗಳಲ್ಲಿರುವ ಗ್ರಂಥಗಳು, ಧಾರಕ, ಪೋಷಕ, ಭೋಗ್ಯ ಎಂದು ಸಾರಿ ಹೇಳಿ, ಉಭಯ ವೇದಾಂತ ಪ್ರವರ್ತಕ ಸಂಪ್ರದಾಯವನ್ನು ಸ್ಥಿರಗೊಳಿಸಲು ಯತ್ನಿಸಿದ ವ್ಯಕ್ತಿಗಳಲ್ಲಿ ಶ್ರೇಷ್ಠರೆನಿಸಿಕೊಂಡರು

ಆದರ್ಶ ಪತ್ನಿ ತಿರುಮಂಗೈಯೊಡನೆ ಪವಿತ್ರ ಗೃಹಸ್ಥ ಜೀವನವನ್ನು ನಡೆಸಿದ ವೇದಾಂತ ದೇಶಿಕರು ಜನತೆಯ ಸೇವೆಗಾಗಿ ಇಡೀ ಜೀವನವನ್ನೇ ಮುಡುಪಾಗಿಟ್ಟುದಲ್ಲದೆ, ಜನರು ಭಕ್ತಿ-ಪ್ರಪತ್ತಿಗಳಿಂದ ಕೃತಾರ್ಥರಾಗಲು ಬೇಕಾದ ನೆರವು ನೀಡಿದ್ದಾರೆ. ವೈರಾಗ್ಯದ ಗಣಿ ಎನಿಸಿದ ಇವರು, ತಮ್ಮ ಬಾಲ್ಯಮಿತ್ರರಾದ ಮಂತ್ರಿ ವಿದ್ಯಾರಣ್ಯರು ಕೊಡಿಸಲು ಒಪ್ಪಿದ ವಿಜಯನಗರದ ರಾಜಾಶ್ರಯವನ್ನು ವಿನಯದಿಂದಲೇ ತಿರಸ್ಕರಿಸಿ, ಭಿಕ್ಷೆಮಾಡಿ ಬಡತನದಿಂದಲೇ ಜೀವನವನ್ನು ನಡೆಸಿದ ಮಹಾತ್ಮಾಗಿ ಹಾಗೂವಿರಕ್ತರು. ವಿದ್ಯಾರಣ್ಯರ ಜೊತೆಯಲ್ಲಿ, ಸನಾತನ ಧರ್ಮ ಸಾಮ್ರಾಜ್ಯದ ಸ್ಥಾಪನೆಗೆ ಹಾಗೂ ಭಾರತದ ರಾಜಕೀಯ ಚಳುವಳಿಗೆ, ಮೂಲಭೂತವಾಗಿ ಬೇಕಾದ ಆಧ್ಯಾತ್ಮಿಕ ಶಕ್ತಿಯನ್ನು ಜಾಗೃತಗೊಳಿಸಲು, ವೇದಾಂತದೇಶಿಕರು ಸಲ್ಲಿಸಿದ ಸೇವೆಯೂ ಅತ್ಯಪೂರ್ವವಾದುದು.

ಅದ್ವೈತಾಚಾರ್ಯರಾದ ವಿದ್ಯಾರಣ್ಯ, ದ್ವೈತಾಚಾರ್ಯರಾದ ಅಕ್ಷೋಭ್ಯ ತೀರ್ಥ, ಇಬ್ಬರಲ್ಲಿಯೂ "ತತ್ತ್ವಮಸಿ" ಎಂಬುದರ ಅರ್ಥದ ಬಗ್ಗೆ ವಾದ ವಿವಾದಗಳು ನಡೆದಾಗ, ವಿಶಿಷ್ಟಾದ್ವೈತಾಚಾರ್ಯರಾದ ವೇದಾಂತದೇಶಿಕರು ತೀರ್ಪುಗಾರರಾಗಿದ್ದರೆಂದರೆ, ಅವರು ಆ ಕಾಲದ ಅತಿ ಶ್ರೇಷ್ಠ ದಾರ್ಶನಿಕ, ನ್ಯಾಯವಾದಿ, ಆಗಿದ್ದರೆಂಬುದು ದಿಟವೆನಿಸುತ್ತದೆ.

ರಾಮಾನುಜರು ಅಸ್ತಿಭಾರ ಹಾಕಿದ ವಿಶಿಷ್ಟಾದ್ವೈತ ಸಂಪ್ರದಾಯವನ್ನು ಅಚಲವಾಗಿ ಸ್ಥಿರಗೊಳಿಸಿ, ಸ್ವರ್ಗಭೂಮಿಗಳಿಗಿದ್ದ ಕಂದಕವನ್ನು ಮುಚ್ಚಿ, ಭಕ್ತ ಕೋಟಿಗೆ ಸದ್ಗತಿಯ ಪಥವನ್ನು ತೋರಿಸಿಕೊಟ್ಟರು. ರಾಮಾನುಜರಿಂದ ನೆಡಲ್ಪಟ್ಟ ವಿಶಿಷ್ಟಾದ್ವೈತವೆಂಬ ಸಸಿಯು, ದೊಡ್ಡದಾಗಿ ಶಾಖೋಪಶಾಖೆಗಳುಳ್ಳದಾಗಿ ಬೆಳೆದು, ಅದು ನೀಡುವ ರುಚಿಕರವಾದ ಫಲವು ಎಲ್ಲರಿಗೂ ಸುಲಭವಾಗಿ ಸಿಗುವಂತೆ ಅದನ್ನು ಸಾಕಿ ಸಲಹಿದವರು ನಿಗಮಾಂತದೇಶಿಕರು.

ನಾನಾಶಾಸ್ತ್ರ ಪ್ರವೀಣ, ಪ್ರೌಢಕಾವ್ಯ ಪ್ರಣೇತ, ಕವಿತಾರ್ಕಿಕಸಿಂಹ, ಸರ್ವತಂತ್ರ ಸ್ವತಂತ್ರ, ಶ್ರೀವೈಷ್ಣವ ಸಿದ್ಧಾಂತ ಪ್ರವರ್ತನ ದಕ್ಷ, ಉಭಯ ವೇದಾಂತಾಚಾರ್ಯ, ಜ್ಞಾನಭಕ್ತಿ ವೈರಾಗ್ಯ ವಿನಯತಪಸ್ವಿ ಎನಿಸಿಕೊಂಡಿದ್ದ

ವೇದಾಂತದೇಶಿಕರ ಕೀರ್ತಿಯನ್ನು ಸಹಿಸದ ಅನೇಕ ಜನರು, ಇವರಿಗೆ ನಾನಾ ರೀತಿಯಲ್ಲಿ ಕಿರುಕುಳ ಕೊಟ್ಟು, ಅಪಮಾನ ಮಾಡಿದ್ದಾರೆ, ಆದರೂ ಇವರು ಯಾವ ಸಂದರ್ಭದಲ್ಲಿಯೂ ಎದೆಗುಂದದೆ, ಕೋಪಗೊಳ್ಳದೆ, ತಮ್ಮ ಪರಮ ಗುರಿಯಾದ ರಾಮಾನುಜ ಸಿದ್ಧಾಂತದ ಸ್ಥಾಪನೆ, ನಿರೂಪಣೆಗಳನ್ನು ಮುಂದು ವರೆಸಿದರು. ಕೆಲವು ವೇಳೆ ಇವರನ್ನು ವಿರೋಧಿಸಲು ಬಂದವರೂ ಇವರ ದರ್ಶನ ಮಾತ್ರದಿಂದ ತೃಪ್ತರಾಗಿ ಇವರ ಶಿಷ್ಯರಾದುದುಂಟು. ಭಾರತದ ಶುಭ್ರ ಗಗನದಲ್ಲಿ ನಂದಿಹೋಗದೆ ಬೆಳಗುವ ಹಲವು ಜ್ಯೋತಿಗಳಲ್ಲಿ ದೇಶಿಕರು ಒಬ್ಬರು ಎಂದರೆ ಅತಿಶಯೋಕ್ತಿಯಾಗಲಾರದು.

ಇವರ ಮಗ **ನಯನಾರಾಚಾರ್ಯ** ಅಥವಾ ವರದನಾಥರು ಶ್ರೇಷ್ಠ ವಿದ್ವಾಂಸ, ಗ್ರಂಥಕರ್ತ ಆಗಿದ್ದು, ಬ್ರಹ್ಮತಂತ್ರ ಸ್ವತಂತ್ರ ಪರಕಾಲಸ್ವಾಮಿ ಗಳೊಂದಿಗೆ ದೇಶಿಕ ಸಂಪ್ರದಾಯವನ್ನು ಸ್ಥಾಪಿಸಿ, ಇವರ ಪೂಜೆಯು ಶ್ರೀವೈಷ್ಣವ ದೇವಾಲಯಗಳಲ್ಲಿ ನಡೆಯುವಂತೆ ವ್ಯವಸ್ಥೆ ಮಾಡಿ, ದೇಶಿಕ ದರ್ಶನ–ಧರ್ಮಗಳ ಪ್ರಚಾರಕ್ಕೆ ವಿಶೇಷವಾದ ಸೇವೆಯನ್ನು ಸಲ್ಲಿಸಿದ್ದಾರೆ.

"ಲಕ್ಷ್ಮೀಪತಿಯೇ ಪರತತ್ತ್ವ ಹಾಗೂ ಶ್ರೇಷ್ಠ ದೈವ. ನಿತ್ಯಶೇಷಿ, ಪರಮ ಕಾರುಣಿಕ. ಆದ ಶ್ರಿಯಃಪತಿಯಲ್ಲಿ ಆತ್ಮರಕ್ಷಾಭರವನ್ನು ಸಮರ್ಪಿಸು, ಶರಣಾ ಗತಿಯನ್ನು ಮಾಡು ಇದೇ ಮೋಕ್ಷಕ್ಕೆ ಆಗತ್ಯವಾಗಿರುವ ಭಗವತ್ಪ್ರಸನ್ನತೆ ಯನ್ನು ಉಂಟುಮಾಡುವ ಶ್ರೇಷ್ಠ ಸಾಧನ. ಅವನ ಶುಭ ಸಂಕಲ್ಪವೇ ಸಂಸಾರ ಸಾಗರವನ್ನು ಒಣಗಿಸಿ ದಾಟಲು ನೆರವಾಗುತ್ತದೆ. ಮೋಕ್ಷವನ್ನು ಬಯಸುವ ಚೇತನನು, ಮೋಕ್ಷ ಗಳಿಸಲು ಬೇಕಾದ ಜ್ಞಾನವನ್ನು ಬೇಗ ನೀಡುವ, ಸದಾ ಚಾರ್ಯನು ಉಪದೇಶಿಸಿದ ಮಂತ್ರದಿಂದಲೇ ದೇಹಾತ್ಮಾಭಿಮಾನ ರೂಪ ವಾದ ಪಿಶಾಚಿಯನ್ನು ಓಡಿಸಲು ಶಕ್ತನಾಗುತ್ತಾನೆ.

"ಸಾತ್ತ್ವಿಕರ ಅನುಗ್ರಹಕ್ಕೆ ಪಾತ್ರನಾಗಿ ಅವರ ಅನುಷ್ಠಾನವನ್ನು ಲೋಕ ದಲ್ಲಿ ಸ್ಥಾಪಿಸಬೇಕು. ಬ್ರಹ್ಮಜ್ಞಾನಿಗಳಲ್ಲಿ ಅಪಚಾರಪಡಬಾರದು. ಐಹಿಕ ಪುರುಷಾರ್ಥಗಳನ್ನು ತೃಣಸಮಾನವಾಗಿ ಭಾವಿಸಬೇಕು. ಶರಣಾಗತಿಯನ್ನು

ಮಾಡಿದ ನಂತರ, ಚಾತಕಪಕ್ಷಿಯು ಮಳೆಯನ್ನೇ ಎದುರು ನೋಡುತ್ತಿರುವಂತೆ, ಭಗವಂತನು ನಮ್ಮನ್ನು ಯಾವಾಗ ಕರುಣಿಸಿ ಪರಮ ಪದಕ್ಕೆ ಒಯ್ಯುತ್ತಾನೆಂಬುದನ್ನು ನಿರೀಕ್ಷಿಸುತ್ತ ಜೀವಿಸಬೇಕು." ಇದು ವೇದಾಂತ ದೇಶಿಕರ ಉಪದೇಶ ಸಾರ.

ದೇವಾಲಯದ ಘಂಟೆಯ ನಾದವು, ಅಲೆಯ ರೂಪದಲ್ಲಿ ನಾಲ್ಕು ದಿಕ್ಕುಗಳಲ್ಲೂ ಇರುವ ಶ್ರೋತೃಗಳನ್ನು, ಆಲಸ್ಯದಿಂದ ಎಚ್ಚರಿಸಿ ದೈವವನ್ನು ನೆನೆಯುವ ಹಾಗೆ ಮಾಡುವಂತೆ, ಘಂಟಾವತಾರರೆನಿಸಿದ ನಿಗಮಾಂತ ಮಹಾದೇಶಿಕರ ನಿರ್ಣಯಪೂರ್ವಕವಾದ ಮಾತುಗಳು, ಶ್ರೋತೃಗಳ ಮನಸ್ಸನ್ನು ಹೊಕ್ಕು, ಅವರನ್ನು ಚಿಂತನಶೀಲರನ್ನಾಗಿ ಮಾಡಿ, ಕ್ರಮೇಣ ಸನ್ಮಾರ್ಗಕ್ಕೆ ಸೆಳೆಯಬಲ್ಲ ಶಕ್ತಿಯನ್ನು ಪಡೆದಿವೆ. ಅವರ ಕೃತಿಗಳು ನಮಗೆ ಸ್ಫೂರ್ತಿಯನ್ನು ನೀಡುತ್ತವೆ ; ಅವರ ಜ್ಞಾನವು ನಮಗೆ ಮಾರ್ಗದರ್ಶನ ಮಾಡುತ್ತದೆ ; ಅವರ ಆಶೀರ್ವಾದವು ನಮ್ಮನ್ನು ರಕ್ಷಿಸುತ್ತದೆ.

## ಅಧ್ಯಾಯ ೬ = ಮಣವಾಳ ಮಾಮುನಿ

## (1370-1443)

ಶ್ರೀಶೈಲೇಶ ದಯಾಪಾತ್ರಂ ಧೀಭಕ್ತ್ಯಾದಿ ಗುಣಾರ್ಣವಂ ।
ಯತೀಂದ್ರಪ್ರವಣಂ ವಂದೇ ರಮ್ಯಜಾಮಾತರಂ ಮುನಿಂ ॥೧॥
ಮಹಾ ಭೂತಪುರೀಶೋವಾ ವಕುಳಾ ಭರಣೋಪಿವಾ ।
ಪಾರ್ಥಸೂತೋ ಭವೇದೀಶೋ ಮುನಿರ್ವರವರೋ ಮಹಾನ್ ॥೨॥

ವೇದಾಂತ ದೇಶಿಕರು ಪರಮ ಪದವನ್ನು ಹೊಂದಿದ ಮರುವರ್ಷವೇ ಮಣವಾಳ ಮಾಮುನಿಗಳು ಜನ್ಮ ತಾಳಿದುದು ಒಂದು ಅತಿ ಆಶ್ಚರ್ಯಕರವಾದ ಘಟನೆ ವೇದಾಂತ ದೇಶಿಕರಂತೆಯೇ ವೇದಾಂತ ಧರ್ಮವನ್ನು ರಕ್ಷಿಸಲು ಶ್ರಮಿಸಿದ ಪ್ರಸಿದ್ಧ ವಿದ್ವಾಂಸರಾದ ಪಿಳ್ಳೈ ಲೋಕಾಚಾರ್ಯರ ಶಿಷ್ಯರಾದ ಕೊಲ್ಲಿ ಕಾವಲಿದಾಸರ್ ಅಥವಾ ಕೊಟ್ಟೂರು ಅಳಗಿಯ ಮಣವಾಳ ಪಿಳ್ಳೈಯವರ ಮಗಳ ಮಗನೇ ಮಣವಾಳ ಮಾಮುನಿ. ರಾಮಾನುಜರು ತಾವು ಜೀವಿಸಿದ್ದಾಗ ವಿಶಿಷ್ಟಾದ್ವೈತ ದರ್ಶನಕ್ಕೆ ಮಾಡಲಾಗದಿದ್ದ ಕಾರ್ಯವನ್ನು, ವೇದಾಂತ ದೇಶಿಕ ಮತ್ತು ಮಣವಾಳ ಮಾಮುನಿ ಇವರ ಮೂಲಕ ಮಾಡಿ ಮುಗಿಸಿದರೆಂಬುದು ಕೆಲವು ಶಿಷ್ಯರ ಅಭಿಪ್ರಾಯ

ಮಣವಾಳ ಮಾಮುನಿಗಳಿಗೆ ವರವರಮುನಿ, ಯತೀಂದ್ರ ಪ್ರವಣರ್, ಪೆರಿಯಜೀಯರ್, ಶ್ರೀಶೈಲೇಶ ದಯಾಪಾತ್ರ, ವಿಶದವಾಕ್ ಶಿಖಾಮಣಿ, ರಾಮಾನುಜರ್ ಪೊನ್ನಡಿ, ಎರಡನೆಯ ಅಳಗಿಯ ಮಣವಾಳ ಪೆರುಮಾಳ್ ನಾಯನಾರ್, ರಮ್ಯಜಾಮಾತೃ, ಮುಪ್ಪತ್ತಾರಾಯಿರಪ್ಪಡಿ ಪೆರುಕ್ಕರ್, ಎಂಬ ಹೆಸರುಗಳೂ ಇದ್ದುವು

ಆಳ್ವಾರ್ ತಿರುನಗರಿಯ ಬಳಿಯ ತಿರುಕ್ಕುರ್‌ಹೂರ್ ಅಥವಾ ಕುರುಕಾಪುರಿ ಎಂಬಲ್ಲಿ, ಶೆಟ್ಟೆ ಕುಲದ ಗೋಮಠ ತಿರುನಾವೀರುಡೈಯ ಪಿರಾನ್ ತಾತರಣ್ಣರ್ ಅರೈಯರ್ ಮತ್ತು ಶ್ರೀರಂಗ ನಾಚ್ಚಿಯಾರ್ ಇಬ್ಬರ ಮಗನಾಗಿ, ಮಣವಾಳರು ಜನಿಸಿದರು. ಸುಂದರವಾದ ರೂಪ, ತೀಕ್ಷ್ಣಬುದ್ಧಿ, ಅಪಾರ ಭಕ್ತಿ ಇವರಲ್ಲಿ ತುಂಬಿದ್ದುವು.

ಆಳ್ವಾರ್ ತಿರುನಗರಿಯಲ್ಲಿ ದರ್ಶನ ಸ್ಥಾಪಕರಾಗಿದ್ದ ತಿರುವಾಯ್ಮೊಳಿ ಪಿಳ್ಳೈ ಅಥವಾ ಶ್ರೀಶೈಲೇಶನಾಥರು ಪಂಡಿತರು, ವಾಗ್ಮಿಗಳು, ದೊಡ್ಡ ಲೇಖಕರು ಆಗಿದ್ದು, ದಿವ್ಯ ಪ್ರಬಂಧಗಳನ್ನು ಉತ್ತಮ ರೀತಿಯಲ್ಲಿ ಪ್ರಚಾರ ಮಾಡಬೇಕೆಂದು ಹಂಬಲಿಸುತ್ತ, ಶ್ರೀ ರಾಮಕೃಷ್ಣ ಪರಮಹಂಸರು ಸ್ವಾಮಿ ವಿವೇಕಾನಂದರಂತಹ ಶಿಷ್ಯನಿಗಾಗಿ ಕಾಯುತ್ತಿದ್ದಂತೆ, ಒಬ್ಬ ಯೋಗ್ಯ ಶಿಷ್ಯನ ಆಗಮನಕ್ಕಾಗಿ ಕಾಯುತ್ತಿದ್ದರು

ಮಣವಾಳ ಮಾಮುನಿಗಳಿಗೆ ವೇದ-ಪ್ರಬಂಧಗಳಲ್ಲಿನ ಪ್ರಾರಂಭಿಕ ಶಿಕ್ಷಣವು ತಂದೆಯಿಂದಲೇ ದೊರಕಿತು. ಕಂಚಿಯಲ್ಲಿದ್ದ ಕಿಡಾಂಬಿನಾಯನಾರ್ ರವರಲ್ಲಿ ಶ್ರೀಭಾಷ್ಯಾದಿಗಳ ಕಾಲಕ್ಷೇಪ ಮಾಡಿದರು. ತಿರುವಾಯ್ಮೊಳಿಪಿಳ್ಳೈ ಯವರನ್ನು ಆಶ್ರಯಿಸಿ, ರಹಸ್ಯಾರ್ಥಗಳನ್ನು ತಿಳಿದುಕೊಂಡರು. ಹೀಗೆ ಉಭಯ ವೇದಾಂತದಲ್ಲಿ ನಿಷ್ಣಾತರಾಗಿದ್ದರೂ, ಗುರುಗಳ ಆಜ್ಞೆಗೆ ಕಟ್ಟುಬಿದ್ದು, ದ್ರಾವಿಡ ವೇದ ಮತ್ತು ಆಳ್ವಾರಾಚಾರ್ಯರ ರಹಸ್ಯಾರ್ಥಗಳನ್ನೇ ಮುಖ್ಯವಾಗಿ ಪ್ರಚಾರ ಮಾಡುವೆನೆಂದು, ಗುರುಗಳಾದ ತಿರುವಾಯ್ಮೊಳಿಪಿಳ್ಳೈಗಳಿಗೆ ವಾಗ್ದಾನ ಮಾಡಿದುದರಿಂದ, ಇವರು ತಮಿಳಿಗೇ ಹೆಚ್ಚು ಪ್ರಾಧಾನ್ಯ ಕೊಡುತ್ತಾ, ಮಣಿ ಪ್ರವಾಳ ಶೈಲಿಯಲ್ಲಿಯೇ ಉಪದೇಶಿಸುತ್ತಿದ್ದರು.

ತಿರುವಾಯ್ಮೊಳಿಪಿಳ್ಳೈಯವರ ಸಹಾಧ್ಯಾಯಿಗಳಾದ ಜನನ್ಯಾಚಾರ್ಯ ಅಥವಾ ತಿರುನಾರಾಯಣ ಪುರತ್ತಆಯ್‌ರವರಿಂದ ಆಚಾರ್ಯ ಹೃದಯ ಮತ್ತು ರಹಸ್ಯಗ್ರಂಥಗಳನ್ನು ಕಲಿತರು. ಪೆರಿಯನಂಬಿಗಳಿಂದ ರಾಮಾನುಜರು ಕಲಿತಂತೆ, ಮಣವಾಳ ಮಾಮುನಿಗಳು ಜನನ್ಯಾಚಾರ್ಯರಿಂದ ಕಲಿತರು. ಸಂಸ್ಕೃತ ವೇದಾಂತಕ್ಕೆ ಮಾಡಿದ ಸೇವೆಯಿಂದ ರಾಮಾನುಜರು ಸೂರ್ಯನಂತೆ ದೇದೀಪ್ಯ ಮಾನರಾಗಿದ್ದರೆ, ತಮಿಳು ಪ್ರಬಂಧಕ್ಕೆ ಮಾಡಿದ ಸೇವೆಯಿಂದ ವರವರಮುನಿ ಗಳು ಚಂದ್ರನಂತೆ ಆಹ್ಲಾದಕರರಾಗಿದ್ದಾರೆ. ವೇದಾಂತ ದೇಶಿಕರಷ್ಟೇ ಪ್ರಖ್ಯಾತರಾದ ಇವರು, ಅವರನ್ನು ಶ್ರೀವೈಷ್ಣವ ಮತದ ಗೌರವಾನ್ವಿತ ವ್ಯಕ್ತಿ ಯೆಂದು ಕರೆದು, ಅವರ ಬಗ್ಗೆ ಮೆಚ್ಚುಗೆ ಸೂಚಿಸಿದ್ದಾರೆ. ಇದರಿಂದ ಇವರ ಕಾಲದಲ್ಲಿ ವಡಗಲೆ-ತೆಂಗಲೆ ಭೇದವು ಈಗಿನಷ್ಟು ಹೆಚ್ಚಾಗಿ ಇರಲಿಲ್ಲವೆಂದು ಊಹಿಸಬಹುದು.

ಮಣವಾಳರು ಶ್ರೀರಂಗದಲ್ಲಿದ್ದ ಶಠಗೋಪ ಜೀಯರ್‌ರವರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ಅಲ್ಲಿನ ದೇವಾಲಯದಲ್ಲಿ ಈಡುಮುಪ್ಪತ್ತಾ ರಾಯಿರಪ್ಪಡಿ ವ್ಯಾಖ್ಯಾನದೊಂದಿಗೆ, ತಿರುವಾಯ್ಮೊಳಿಯ ಕಾಲಕ್ಷೇಪ ಹೇಳಿ ದರು. ತಮ್ಮ ಸರಳ, ಮಧುರ, ಗಾಂಭೀರ್ಯ ಪೂರ್ಣ, ಅದ್ಭುತ ಪಾಂಡಿತ್ಯ ಪೂರ್ಣ, ಶೈಲಿಯ ಪ್ರವಚನದಿಂದ, ವ್ಯಾಖ್ಯಾನ ಹಾಗೂ ಸ್ತೋತ್ರ-ಗ್ರಂಥಗಳ

ರಚನೆಯಿಂದ, ಮಣವಾಳ ಮಾಮುನಿಗಳು, ರಾಮಾನುಜ ಸಿದ್ಧಾಂತ ಮತ್ತು ಶ್ರೀವೈಷ್ಣವ ಸಮಾಜಗಳೆರಡನ್ನೂ ಪುನರುತ್ಥಾನಗೊಳಿಸಿದರು.

ಮಧುರಾಂತಕ, ಕಂಚಿ, ತಿರುಪತಿ, ಶ್ರೀ ಪೆರಂಬೂದೂರು, ಮೇಲು ಕೋಟೆ ಮುಂತಾದ ದಿವ್ಯಕ್ಷೇತ್ರಗಳಿಗೆ ಯಾತ್ರೆ ಹೋಗಿಬಂದರು. ಶ್ರೀಮಂತ ಶಿಷ್ಯರ ನೆರವಿನಿಂದ ಸಾವಿರಾರು ವಿಷ್ಣು ದೇವಾಲಯಗಳ ಜೀರ್ಣೋದ್ಧಾರಕ್ಕೆ ಕಾರಣರಾದರು. ವೇದಾಂತ ದೇಶಿಕರು ವಡಗಲೆ ಸಂಪ್ರದಾಯಕ್ಕೆ ಆದಂತೆ, ಮಣವಾಳ ಮಾಮುನಿಗಳು ತೆಂಗಲೆ ಸಂಪ್ರದಾಯಕ್ಕೆ ಮೂಲ ಪುರುಷರೆನಿಸಿದರು.

ಮಣವಾಳ ಮಾಮುನಿಗಳ ಸಾಹಿತ್ಯ ರಚನೆ ಹೀಗಿದೆ :

1) ಪಿಳ್ಳೈ ಲೋಕಾಚಾರ್ಯರ ತತ್ತ್ವತ್ರಯ, ಶ್ರೀವಚನಭೂಷಣ, ಮುಮುಕ್ಷುಪ್ಪಡಿ ಎಂಬ ಮೂರು ಕೃತಿಗಳಿಗೆ, ಮೊದಲನೆಯ ಅಳಗಿಯ ಮಣವಾಳ ಪೆರುಮಾಳ್ ನಾಯನಾರ್‌ರವರ ಆಚಾರ್ಯ ಹೃದಯಕ್ಕೆ, ಪೆರಿಯ ವಾಚ್ಚಾನ್‌ಪಿಳ್ಳೈಯವರ ಇರವತ್ತುನಾಲಾಯಿರಪ್ಪಡಿಯಲ್ಲಿ ಲಭ್ಯವಿರದ 410 ಪಾಶುರಗಳಿಗೆ, ತಿರುವರಂಗತ್ತಮುದನಾರರ ರಾಮಾನುಜ ನೂತ್ತಂದಾದಿ ಹಾಗೂ ಅರುಳಾಳಪ್ಪೆರುಮಾಳರ ಜ್ಞಾನಸಾರ–ಪ್ರಮೇಯಸಾರಗಳಿಗೆ, ಭಗವದ್ಗೀತೆಗೆ –ವ್ಯಾಖ್ಯಾನಗಳನ್ನು ರಚಿಸಿದರು.

2) ಈಡುಮುಪ್ಪತ್ತಾರಾಯಿರಪ್ಪಡಿಯಲ್ಲಿ ಬರುವ ಪ್ರಮಾಣ ವಚನಗಳಿಗೆ ಇರುವ ಆಧಾರ ಗ್ರಂಥಗಳ ಪಟ್ಟಿ, ಸಕಲ ಶಾಸ್ತ್ರಾರ್ಥ ಸಾರನಿಧಿ, ಎನಿಸಿಕೊಂಡಿರುವ ಪ್ರಮಾಣತ್ತಿರಟ್ಟು ಎಂಬ ಗ್ರಂಥವನ್ನು ರಚಿಸುವುದರ ಮೂಲಕ, ತಮ್ಮ ಅಪೂರ್ವ ಪಾಂಡಿತ್ಯ ಹಾಗೂ ಸಂಶೋಧನಾ ಸಾಮರ್ಥ್ಯಗಳನ್ನು ತೋರಿಸಿದ್ದಾರೆ.

3) ವೇದಾಂತ ದೇಶಿಕರ ದ್ರವಿಡೋಪನಿಷತ್ತಾತ್ಪರ್ಯ ರತ್ನಾವಳಿಯಂತಿರುವ ತಿರುವಾಯ್ಮೊಳಿನೂತ್ತಂದಾದಿ ಎಂಬ ಸಂಗ್ರಹ ರೂಪಕ,

ಯತಿರಾಜ ಸಪ್ತತಿಯುಂತಿರುವ ಯತಿರಾಜವಿಂಶತಿ, ಪ್ರಬಂಧಸಾರದಂತಿರುವ ಉಪದೇಶ ರತ್ನಮಾಲೈ, ರಾಮಾನುಜರಿಗೆ ಭಕ್ತಿಯನ್ನು ತೋರಿಸುವ ಆರ್ತಿ ಪ್ರಬಂಧ, ರಾಮಾನುಜರ ನಿತ್ಯಗ್ರಂಥದಲ್ಲಿರುವುದನ್ನು ವಿವರಿಸುವ ತಿರುವಾರಾಧನ ಕ್ರಮ, ಭಗವದ್ವಿಷಯದಲ್ಲಿ ಬರುವ ಕಠಿಣ ಶಬ್ದಗಳ ವಿವರಣೆಯುಳ್ಳ ಅರುಂಪದಂ, ದೇವರಾಜ ಮಂಗಲಂ ಎಂಬ ಗ್ರಂಥಗಳನ್ನು ರಚಿಸಿದ್ದಾರೆ.

ತಮ್ಮ ಸಂಪ್ರದಾಯವನ್ನು ರಕ್ಷಿಸಿ, ಪ್ರಚಾರ ಮಾಡುವ ಸಲುವಾಗಿ, ವರವರಮುನಿಗಳು, ಅಷ್ಟದಿಗ್ಗಜಗಳೆಂಬ ಎಂಟು ಜನ ದಕ್ಷ ಶಿಷ್ಯರನ್ನು ಎಂಟು ಮುಖ್ಯಸ್ಥಳಗಳಲ್ಲಿ ನೇಮಿಸಿದರು. ಹೀಗೆ ಇವರು ಆಳ್ವಾರಾಚಾರ್ಯರುಗಳಿಂದ ಬಹುಮಟ್ಟಿಗೆ ಉಪದೇಶ ರೂಪವಾಗಿ ಬಂದಿದ್ದ ಅರ್ಥಪಂಚಕ ಹಾಗೂ ಆಚಾರ್ಯಾಭಿಮಾನಗಳನ್ನು ಉಪದೇಶಿಸಿದುದಲ್ಲದೆ, ಅನುಷ್ಠಾನ ಮಾಡಿಯೂ ತೋರಿಸಿದ್ದಾರೆ.

"ಜ್ಞಾನ ಕರ್ಮಗಳಿಗಿಂತಲೂ ಭಕ್ತಿಯೇ ಮುಖ್ಯ. ವ್ಯಕ್ತಿನಿಷ್ಠೆಗಿಂತಲೂ ಸಮಾಜ ನಿಷ್ಠೆಯೇ ಮುಖ್ಯ. ಸಜ್ಜನ ಸಮಾಜಕ್ಕೆ ಪ್ರತಿಯೊಬ್ಬ ವ್ಯಕ್ತಿಯೂ ಅನುಕೂಲವಾಗಿರಬೇಕು. ಯಾವ ಜಾತಿಯಲ್ಲೇ ಹುಟ್ಟಿರಲಿ, ಭಕ್ತರೆನಿಸಿದವರು ಆಧ್ಯಾತ್ಮಿಕವಾಗಿ ಸಮಾನರು. ದೈವಕೃಪೆಗೆ ಯತ್ನ ಅನವಶ್ಯಕ. ಗುರುವೇ ಅಂತ್ಯ ಉದ್ಧಾರಕ ವಿಷಕ್ಕಿಂತಲೂ ಕ್ರೂರವಾದ ವಿಷಯಗಳ ದರ್ಶನ, ಸ್ಪರ್ಶ, ಭೋಗಗಳಿಂದ ಆತ್ಮವು ನಾಶವಾಗುತ್ತದೆ. ಅಹಂಕಾರವೇ ಕ್ರೋಧ, ಮೋಹ ಮುಂತಾದ ಸರ್ವ ವಿಧವಾದ ದೋಷಗಳಿಗೂ ಮೂಲ.

"ಧರ್ಮಾನುಷ್ಠಾನದಲ್ಲಿ ಆಸಕ್ತಿಯಿದ್ದು ಶ್ರೇಯಸ್ಸನ್ನು ಕೋರುವವನು, ನರಕಕ್ಕೆ ಕಾರಣವಾದ ಧನಸಂಪತ್ತನ್ನು ಆಶಿಸಬಾರದು. ಭಾಗವತರೂ ಭಗವಂತನ ಸಮಾನರು ಹಾಗೂ ಪೂಜ್ಯರು ಎಂದು ತಿಳಿದು, ಅವರ ಸೇವೆಯಲ್ಲಿ ನಿರತರಾಗಿರುವವರೇ ಶ್ರೇಷ್ಠ ಆತ್ಮಜ್ಞಾನಿಗಳು, ಇಂತಹ ಭಾವನೆಯುಳ್ಳವರು ತಾವೂ ಉದ್ಧಾರವಾಗಿ ತಮ್ಮ ಆಚಾರ್ಯರಿಗೂ ಪ್ರತ್ಯುಪಕಾರ ಮಾಡುತ್ತಾರೆ.

ಸಮಸ್ತ ಜೀವಕೋಟಿಯಲ್ಲಿಯೂ ಅಂತರ್ಯಾಮಿಯಾಗಿ ನೆಲೆಸಿರುವ ಪರಮಾತ್ಮನನ್ನು ಅರಿತು, ಭಾಗವತ ನಿಷ್ಠೆಯಿಂದ ಕೂಡಿರುವವರಿಗೆ, ಮೋಕ್ಷವೆನ್ನುವುದು ಕರತಲಾಮಲಕ ಹಾಗೂ ಕಟ್ಟಿಟ್ಟಬುತ್ತಿ ಆಗಿರುತ್ತದೆ" ಇದು ಮಣವಾಳ ಮಾಮುನಿಗಳ ಚರಮ ಸಂದೇಶ.

## ಅನುಬಂಧ ೧ – ಅಯ್ಯಂಗಾರ್

ವಿಶಿಷ್ಟಾದ್ವೈತಿಗಳು, ಅರ್ಥಪಂಚಕವೆಂಬ ಐದು ಅಂಗಗಳನ್ನು ಅರಿತು ಆಚರಿಸುವ ಪೂಜ್ಯರು, ಪಂಚಕಾಲ ನಿತ್ಯಕರ್ಮಗಳನ್ನು ಮಾಡುವ ಶ್ರೀ ವೈಷ್ಣವ ಭಕ್ತರು, ಪಂಚ ಸಂಸ್ಕಾರಗಳನ್ನು ಹೊಂದಿರುವವರು ಮತ್ತು ಪಂಚರೂಪವನ್ನು ನಂಬಿ ಉಪಾಸಿಸುವವರು ಆಗಿದ್ದು, ತಮ್ಮನ್ನು ಅಯ್ಯಂಗಾರ್ ಎಂದು ಕರೆದು ಕೊಳ್ಳುತ್ತಾರೆ.

### ೧. ಅರ್ಥಪಂಚಕ

ವಿಶಿಷ್ಟಾದ್ವೈತವನ್ನು ಅರಿತು, ಆಚರಿಸಿ, ಫಲವನ್ನು ಪಡೆಯಬೇಕು ಎನ್ನುವವರು ಅವಶ್ಯವಾಗಿ ತಿಳಿಯಬೇಕಾಗಿರುವ ಐದು ಮುಖ್ಯ ವಿಷಯಗಳಿಗೆ ಅರ್ಥಪಂಚಕವೆಂದು ಹೆಸರು.

ಪ್ರಾಪ್ಯಸ್ಯ ಬ್ರಹ್ಮಣೋ ರೂಪಂ ಪ್ರಾಪ್ತುಶ್ಚ ಪ್ರತ್ಯಗಾತ್ಮನಃ ।
ಪ್ರಾಪ್ತ್ಯುಪಾಯಂ ಫಲಂ ಚೈವ ತಥಾಪ್ರಾಪ್ತಿ ವಿರೋಧಿ ಚ ॥

ಎಂಬಂತೆ ಪರಮ ಪ್ರಾಪ್ಯನಾದ ಬ್ರಹ್ಮನ ಸ್ವರೂಪ, ಪರಮಾತ್ಮನಿಗೆ ಶೇಷಭೂತನಾದ ಜೀವಿಯ ಸ್ವರೂಪ, ಪರಮಾತ್ಮನ ಪ್ರಾಪ್ತಿಗೆ ಉಪಾಯ

ಸ್ವರೂಪ, ಪರಮಾತ್ಮನನ್ನು ಹೊಂದಿ ಅನುಭವಿಸುವ ಫಲದ ಸ್ವರೂಪ ಹಾಗೂ ಪರಮಾತ್ಮನ ಪ್ರಾಪ್ತಿಗೆ ಪ್ರತಿಬಂಧಕವಾಗಿರುವ ವಿರೋಧ ಸ್ವರೂಪ —ಇವು ಅರ್ಥಪಂಚಕವೆನಿಸುತ್ತದೆ.

## ೨. ಪಂಚಕಾಲ ಕರ್ಮ

ದಿನದ ಒಂದನೆಯ ಪ್ರಹರದಲ್ಲಿ ಬೆಳಗಿನ ಶೌಚ, ಸ್ನಾನ, ಊರ್ಧ್ವ ಪುಂಡ್ರಧಾರಣೆ, ಸಂಧ್ಯಾವಂದನೆ, ಜಪ, ಧ್ಯಾನ, ಅರ್ಚನೆಗಳನ್ನು ಮಾಡುತ್ತ, ಪರಮಾತ್ಮನ ವಿಷಯದ ಕಡೆ ಇರುವುದು ಅಭಿಗಮನ ; ಎರಡನೆಯ ಪ್ರಹರದಲ್ಲಿ ಭಗವದಾರಾಧನಕ್ಕೆ ಬೇಕಾಗುವ ಪೂಜಾ ಸಾಮಗ್ರಿಗಳನ್ನು ಸಂಗ್ರಹಿಸುವುದು ಮತ್ತು ಜೀವಿಸಲು ಬೇಕಾಗುವಷ್ಟನ್ನು ಸಂಪಾದಿಸುವುದು ಉಪಾದಾನ ; ಮೂರನೆಯ ಪ್ರಹರದಲ್ಲಿ ಉಪಕರಣಗಳಿಂದ ವಿಧ್ಯುಕ್ತವಾಗಿ ದೇವತಾರಾಧನೆಯನ್ನು ಮಾಡುವುದು ಇಜ್ಯಾ ಪೂಜಾ ಮತ್ತು ಪಂಚಯಜ್ಞದ ಮೂಲಕ ದೇವ, ಋಷಿ, ಪಿತೃ, ನರ, ಭೂತ ಎಂಬೀ ಪಂಚಋಣವನ್ನು ತೀರಿಸಿ, ದೇವರಿಗೆ ಸಮರ್ಪಿಸಿದ ಆಹಾರವನ್ನು ಭುಂಜಿಸುವುದು ಅನುಯಾಗ ; ನಾಲ್ಕನೆಯ ಪ್ರಹರದಲ್ಲಿ ತನ್ನ ರುಚಿ, ಶಕ್ತಿ, ಸಾಮರ್ಥ್ಯಗಳಿಗನುಸಾರ ವೇದಶಾಸ್ತ್ರ ಪುರಾಣೇತಿಹಾಸ ಆಗಮ ಪ್ರಬಂಧಗಳ ಶ್ರವಣ, ಮನನ, ಉಪದೇಶಗಳಲ್ಲಿ ನಿರತರಾಗಿರುವುದು ಅಧ್ಯಯನ ಮತ್ತು ಅಧ್ಯಾಪನ ; ರಾತ್ರಿಯ ಮೊದಲನೆಯ ಪ್ರಹರದಲ್ಲಿ ಶರಣಾಗತಿ ಪೂರ್ವಕವಾಗಿ ಭಗವಂತನನ್ನು ಕುರಿತು ಚಿಂತಿಸುತ್ತ, ಭಗವತ್ಪೂಜೆಯನ್ನು ಮಾಡಿ, ಅಷ್ಟಾಂಗ ಯೋಗವನ್ನು ಅನುಷ್ಠಾನ ಮಾಡಿ, ವಿಶ್ರಾಂತಿ ಪಡೆಯುವುದು ಯೋಗ. ಹೀಗೆ ಶ್ರೀವೈಷ್ಣವ ಭಕ್ತನಾದವನು ತನ್ನ ದಿನದ ಸಮಯವನ್ನು ಐದು ಭಾಗವನ್ನಾಗಿ ಮಾಡಿ ಆ ಮೂಲಕ ಭಗವಂತನ ಕೈಂಕರ್ಯದಲ್ಲಿ ನಿರಂತರವಾಗಿ ಇರುತ್ತಾನೆ.

## ೩. ಪಂಚ ಸಂಸ್ಕಾರ

"ತಾಪಃ ಪುಂಡ್ರಸ್ತಥಾ ನಾಮ ಮಂತ್ರೋಯಾಗಶ್ಚ ಪಂಚಮಃ"

ಎಂಬಂತೆ ತಪ್ತ ಅಥವಾ ಭುಜಗಳ ಮೇಲೆ ಶಂಖ-ಚಕ್ರಗಳು, ಪುಂಡ್ರ ಅಥವಾ ಮುಖದ ಮೇಲೆ ನಾಮ, ನಾಮ ಅಥವಾ ವಿಷ್ಣುವಿನ ಹೆಸರು, ಮಂತ್ರ ಅಥವಾ ರಹಸ್ಯತ್ರಯ, ಯಾಗ ಅಥವಾ ಭಗವದಾರಾಧನ – ಈ ಐದು ಗುರುತು ಪಂಚ ಸಂಸ್ಕಾರವೆನಿಸುತ್ತದೆ. ಇದನ್ನು ಹೊಂದಿರುವವನು ಶ್ರೀವೈಷ್ಣವ ನೆನಿಸಿಕೊಳ್ಳಲು ಅರ್ಹನಾಗುತ್ತಾನೆ.

## ೪. ನಾರಾಯಣನ ಪಂಚ ಸ್ವರೂಪ

(i) ವೈಕುಂಠದಲ್ಲಿ ಷಾಡ್ಗುಣ್ಯ ಪೂರ್ಣನಾಗಿ ಭಗವಾನ್, ಸಮಸ್ತ ಭೂತವಾಸಿಯಾಗಿ ವಾಸುದೇವ, ಸಮಸ್ತ ಆತ್ಮಗಳಿಗೂ ಶ್ರೇಷ್ಠನಾಗಿ ಪರಮಾತ್ಮ, ಸರ್ವವ್ಯಾಪಿಯಾಗಿ ವಿಷ್ಣು ಎಂದು ಕರೆಸಿಕೊಳ್ಳುವವನು ಪರ (ii) ಜಗತ್ತಿನ ಪರಮ ಮಂಗಳಕ್ಕಾಗಿ ಪರ ವಾಸುದೇವನು ಸೃಷ್ಟಿಸುವ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ರೂಪಗಳು ವ್ಯೂಹ (iii) ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಬಲರಾಮ, ಶ್ರೀಕೃಷ್ಣ, ಬರಲಿರುವ ಕಲ್ಕಿ ಎಂಬೀ ಅವತಾರಗಳು ವಿಭವ (iv) ಸಕಲ ಚೇತನರಲ್ಲಿಯೂ ಪ್ರವೇಶಿಸಿ, ಅವರ ಹೃತ್ಪುಂಡರೀಕದಲ್ಲಿ ವಿಶಿಷ್ಟ ರೀತಿಯಲ್ಲಿ ಒಳಗಿದ್ದುಕೊಂಡು, ಅವರ ಸ್ವರೂಪಸ್ಥಿತಿ ಪ್ರವೃತ್ತಿಗಳಿಗೆಲ್ಲಾ ನಿಯಂತ್ರಕನಾಗಿ, ಅವರನ್ನು ಸದಾ ರಕ್ಷಿಸುತ್ತಿರುವವನು ಅಂತರ್ಯಾಮಿ (v) ಭಕ್ತರ ಕಲ್ಪನೆಗೆ ಒಳಪಟ್ಟು, ಮನೆ-ಆಲಯಗಳಲ್ಲಿದ್ದು ಆಗಮ ವಿಧಿಯಿಂದ ಪವಿತ್ರಗೊಳಿಸಲ್ಪಟ್ಟು, ಚೇತನರಿಂದ ಪೂಜೆಯನ್ನು ಕೈಕೊಳ್ಳುತ್ತ ಇರುವ ಮೂರ್ತಿಗಳು ಅರ್ಚಾ. ಈ ಜ್ಞಾನವು ಆತ್ಮನ ಶ್ರೇಯಸ್ಸಿಗೆ ಕಾರಣವಾಗಿ, ಮುಕ್ತಿಯನ್ನು ದೊರಕಿಸುತ್ತದೆ.

# ಅನುಬಂಧ ೨ – ಆಳ್ವಾರುಗಳ ದಿವ್ಯಪ್ರಬಂಧ

ಶ್ರೀವೈಷ್ಣವ ಧರ್ಮದ ಇತಿಹಾಸದಲ್ಲಿ ಆಳ್ವಾರುಗಳ ಸ್ಥಾನವು ಬಹು ಮುಖ್ಯವಾದುದು. ಆಳ್ವಾರ್ ಎಂದರೆ ದೈವ ಪ್ರೇಮದಲ್ಲಿ ಐಕ್ಯನಾದವನು, ಆಧ್ಯಾತ್ಮಜ್ಞಾನರೂಪಿಯಾದ ಸಮುದ್ರದಲ್ಲಿ ಸ್ನಾನ ಮಾಡಿರುವವನು, ಭಗವಂತನ ಅನುಭವದಲ್ಲಿ ಯಾವಾಗಲೂ ಆಳವಾಗಿ ಮುಳುಗಿದವನು, ಪರಮಾತ್ಮನಲ್ಲಿ ಅಸದೃಶ ಭಕ್ತಿಯನ್ನು ಹೊಂದಿರುವವನು ಮತ್ತು ರಾಜರು ಹಾಗೂ ಶ್ರೇಷ್ಠ ಕುಲದವರನ್ನು ಆಳುವವನು ಎಂದು ಅರ್ಥ.

ಪೊಯ್‌ಗೈ, ಪೂದತ್ತ, ಪೇಯ್‌, ತಿರುಮಳಿಶೈ, ನಮ್ಮ, ಮಧುರಕವಿ, ಕುಲಶೇಖರ, ಪೆರಿಯಾ, ಆಂಡಾಳ್, ತೊಂಡರಡಿಪ್ಪೊಡಿ, ತಿರುಪ್ಪಾಣ, ತಿರುಮಂಗೈ, –ಎಂಬೀ ಹನ್ನೆರಡು ಜನ ಆಳ್ವಾರುಗಳು, ದಕ್ಷಿಣ ಭಾರತದ ಪಲ್ಲವ, ಚೇರ, ಚೋಳ, ಪಾಂಡ್ಯ ರಾಜ್ಯಗಳಲ್ಲಿ ಆರರಿಂದ ಎಂಟನೆ ಶತಮಾನದ ಮಧ್ಯೆ ಇದ್ದರು, ಇವರು ಉತ್ತರದ ಬದರಿಕಾಶ್ರಮದಿಂದ ದಕ್ಷಿಣದ ಧನುಷ್ಕೋಟಿಯವರೆಗಿನ ನೂರಾರು ದಿವ್ಯ ದೇಶಗಳಲ್ಲಿರುವ ದೇವಾಲಯಗಳಲ್ಲಿರುವ ಅರ್ಚಾಮೂರ್ತಿಗಳನ್ನು ಸಂದರ್ಶಿಸಿ, ಭಕ್ತಿ ಆವೇಶಗಳಿಂದ ಸ್ತುತಿಸಿ, ಭಗವಂತನ ಗುಣಾನುಭವದಿಂದ ಪಡೆದ ಆನಂದವನ್ನು ಸರಳ, ಮಧುರ, ದಿವ್ಯ ಆದ ಗೀತೆಗಳ ರೂಪದಲ್ಲಿ ಹಾಡಿ, ಬಣ್ಣಿಸಿ, ಆ ಮೂಲಕ ಭಾರತ ದೇಶದಲ್ಲಿ ನಂದಿ ಹೋಗಿದ್ದ ದೈವಭಕ್ತಿ ಮತ್ತು ದೈವಪೂಜೆಗಳೆಂಬ ದಿವ್ಯಜ್ವಾಲೆಯನ್ನು ಮತ್ತೆ ಹೊತ್ತಿಸಿ ಬೆಳಗಿಸಲು ಕಾರಣರಾದರು.

ವಿಷ್ಣು ಮತ್ತು ಅವನ ಅವತಾರಗಳ –ಮುಖ್ಯವಾಗಿ ಶ್ರೀಕೃಷ್ಣನ– ವಿಷಯವೇ ತುಂಬಿರುವ, ಆಳ್ವಾರುಗಳ ದಿವ್ಯಪ್ರಬಂಧವೆಂಬ ಗೀತೆಗಳ ಮೂಲಕ ವೇದಾಂತ ತತ್ತ್ವದ ಭಕ್ತಿಪಂಥವನ್ನು ಜನರ ಆಡುಭಾಷೆಯಾದ ತಮಿಳಿನಲ್ಲಿ

ಪ್ರಚಾರವಾಗಲು ಅನುಕೂಲವಾಯಿತು. ಪರಮ ಪ್ರಮಾಣವಾದ ವೇದಗಳ ಉಪದೇಶ ಸಾರವನ್ನು ಒಳಗೊಂಡಿರುವುದರಿಂದಲೂ, ವೇದಗಳ ಉಪದೇಶಕ್ಕೆ ವಿರುದ್ಧವಾದುದಾವುದನ್ನೂ ಹೊಂದಿಲ್ಲದಿರುವುದರಿಂದಲೂ, ಈ ದಿವ್ಯಪ್ರಬಂಧಗಳೂ ಸಹ ವೇದಗಳಂತೆಯೇ ಪರಮ ಪ್ರಮಾಣವಾಗಿ ದ್ರಾವಿಡ ವೇದ-ದ್ರಮಿಡೋಪನಿಷತ್ ಎನಿಸಿಕೊಂಡಿವೆ ಹಾಗೂ ಶ್ರೀವೈಷ್ಣವ ಧರ್ಮಸಾಹಿತ್ಯದಲ್ಲಿ ಸರ್ವ ಶ್ರೇಷ್ಠವೆಂದು ಅಂಗೀಕೃತವಾಗಿವೆ ಇವು ಶ್ರೀವೈಷ್ಣವರ ಮೂಲ ಸಿದ್ಧಾಂತವಾದ ಮೂಲ, ದ್ವಯ ಮತ್ತು ಚರಮ ಶ್ಲೋಕ ಮಂತ್ರಗಳೆಂಬ ರಹಸ್ಯತ್ರಯವನ್ನು ಪ್ರತಿಪಾದಿಸುವುದರಿಂದ ಜನರ ಆದರಕ್ಕೆ ಪಾತ್ರವಾಗಿವೆ. ಐಹಿಕವಾದ ಐಶ್ವರ್ಯವಾಗಲೀ, ಆತ್ಮಾನುಭವರೂಪವಾದ ಕೈವಲ್ಯವಾಗಲೀ, ಪರಮ ಪುರುಷಾರ್ಥವಲ್ಲ ; ಪರಮ ಮಂಗಳ ಸ್ವರೂಪನಾದ ಭಗವಂತನನ್ನು ಸೇರಿ ಅವನಿಗೆ ನಿತ್ಯಕೈಂಕರ್ಯ ಮಾಡವುದೇ ಪರಮ ಪುರುಷಾರ್ಥ ಎಂಬುದನ್ನು ಇವು ನಿರ್ಧಾರಕವಾಗಿ ಪ್ರತಿಪಾದಿಸುತ್ತವೆ.

ಹೀಗೆ ಭಕ್ತಿಪಂಥವನ್ನು ರೂಢಿಸಿ, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಬೇಕಾದ ಸಂಪ್ರದಾಯದ ಚೌಕಟ್ಟನ್ನು ಒದಗಿಸಿದವರು ಆಳ್ವಾರುಗಳು. ತಮಿಳಿನ ಪ್ರಬಂಧವು ಸಂಸ್ಕೃತದ ಉಪನಿಷತ್ತುಗಳೊಡನೆ ಸೇರಿ, ಉಭಯ ವೇದಾಂತ ಎನಿಸಿಕೊಂಡು, ವಿಶಿಷ್ಟಾದ್ವೈತಕ್ಕೆ ಆಧಾರವಾಯಿತು ಹಾಗೂ ಶ್ರೀವೈಷ್ಣವ ಮತೀಯರಿಗೆ ನಿತ್ಯಾನುಸಂಧೇಯ, ಕಾಲಕ್ಷೇಪ ವಿಷಯ ಆದುವು. ಕರ್ಮ ಸಂಸ್ಕಾರ ಮತ್ತು ವೇದಾಧ್ಯಯನಗಳಿಂದ ಬ್ರಾಹ್ಮಣ್ಯ ಸಿದ್ಧಿಸುವಂತೆ, ಪಂಚ ಸಂಸ್ಕಾರ ಮತ್ತು ಪ್ರಬಂಧ ಪಾರಾಯಣಗಳಿಂದಲೂ ಶ್ರೀವೈಷ್ಣವತ್ವವು ಸಿದ್ಧಿಸುತ್ತದೆ. ಆದಕಾರಣ, ದೇವರ ಉತ್ಸವ ಕಾಲದಲ್ಲಿ ಉತ್ಸವ ಮೂರ್ತಿಯ ಮುಂಭಾಗದಲ್ಲಿ ಪ್ರಬಂಧ, ಹಿಂಭಾಗದಲ್ಲಿ ವೇದ –ಇವೆರಡರ ಪಾರಾಯಣ ನಡೆಯುವ ಸಂಪ್ರದಾಯ ಬಂದಿತು.

ದ್ರಾವಿಡ ಪ್ರಬಂಧಗಳಿಗೆ ರಾಮಾನುಜ ಸಿದ್ಧಾಂತದಲ್ಲಿ ಮುಖ್ಯವಾದ ಸ್ಥಾನ ಏರ್ಪಟ್ಟುದು ನಾಥಮುನಿಗಳ ಕಾಲದಲ್ಲಿ. ಇವರು ಕೆಲಕಾಲ ಲುಪ್ತವಾಗಿ ಹೋಗಿದ್ದ ಆಳ್ವಾರುಗಳ ಗೀತೆಗಳನ್ನು ನಾಲಾಯಿರ ಪ್ರಬಂಧ ರೂಪದಲ್ಲಿ

ಮೂರನೆ ಪ್ರಕಾರವಾದ ಅಚೇತನವೂ, ವಿಷ್ಣುವಿಗೇ ಶೇಷಭೂತವಾದುದು ; ಅಕಾರ, ಮಕಾರ ವಾಚ್ಯರಾದ ಪರಮಾತ್ಮ-ಜೀವಾತ್ಮರುಗಳ ಸಂಬಂಧವು ಅನನ್ಯಾರ್ಹವೆಂದು ಉಕಾರವು ಹೇಳುತ್ತದೆ ; ಮುಖ್ಯವಾಗಿ ಸರ್ವಲೋಕ ನಿಯಾಮಕನಾದ ವಿಷ್ಣುವೇ ಅಕಾರಾರ್ಥವು, ಲಕ್ಷ್ಮಿಯೇ ಉಕಾರಾರ್ಥವು, ಲಕ್ಷ್ಮೀನಾರಾಯಣರಿಗೆ ದಾಸನಾದ ಜೀವಾತ್ಮನೇ ಮಕಾರ ಶಬ್ದಾರ್ಥವು ; ಅಕಾರವು ಪಿತೃಪುತ್ರ, ರಕ್ಷ್ಯ ರಕ್ಷಕ, ಶೇಷಶೇಷಿ ಸಂಬಂಧ ದ್ಯೋತಕವು ; ಉಕಾರವು ಭರ್ತೃಭಾರ್ಯಾ ಸಂಬಂಧವನ್ನು ಸೂಚಿಸುತ್ತದೆ ; ಮಕಾರ ದಿಂದ ಜ್ಞಾತೃ ಜ್ಞೇಯ ಸಂಬಂಧವೂ, ನಮಸ್ ಶಬ್ದದಿಂದ ಸ್ವಸ್ವಾಮಿ ಸಂಬಂಧವೂ, ನಾರ ಶಬ್ದದಿಂದ ಶರೀರಿ ಶರೀರ ಸಂಬಂಧವೂ, ಅಯನ ಶಬ್ದದಿಂದ ಆಧಾರಾಧೇಯ ಸಂಬಂಧವೂ, ಆಯ ಶಬ್ದದಿಂದ ಭೋಕ್ತೃ ಭೋಗ್ಯ ಸಂಬಂಧವೂ ಸೂಚಿತವಾಗಿದೆ.

ಹೀಗೆ ಈ ತಿರುಮಂತ್ರದಲ್ಲಿ ಈಶ್ವರ-ಚೇತನರ ಮಧ್ಯೆ ಇರುವ ನವವಿಧ ಸಂಬಂಧಗಳೂ ವ್ಯಕ್ತವಾಗಿವೆ. ಆದುದರಿಂದಲೇ ಇದು ಮುಮುಕ್ಷುವಿಗೆ ನಿತ್ಯಾನುಸಂಧೇಯವಾದುದು.

ಈ ಮಂತ್ರದಲ್ಲಿನ ಓಂ, ನಮಃ, ನಾರಾಯಣಾಯ ಎಂಬ ಮೂರು ಶಬ್ದಗಳಲ್ಲಿ, ಕ್ರಮವಾಗಿ ಶೇಷತ್ವ, ಪಾರತಂತ್ರ್ಯ, ಕೈಂಕರ್ಯ, ಎಂಬ ಮೂರು ಪ್ರಧಾನ ಅರ್ಥಗಳು ಸೂಚಿಸಲ್ಪಟ್ಟಿವೆ. ಭಗವಂತನಿಗೆ ಅಧೀನನಾಗಿರು ವುದು ಶೇಷತ್ವ ಮತ್ತು ಪಾರತಂತ್ರ್ಯ. ಭಗವದ್ಭಾಗವತರಿಗೆ ಸೇವೆ ಮಾಡುತ್ತ, ಗಂಧ, ಹೂ, ಕರ್ಪೂರ, ವೃಕ್ಷಗಳಂತೆ ನಿಸ್ವಾರ್ಥ ಜೀವನ ನಡೆಸುವುದು ಕೈಂಕರ್ಯ. ನಾನು ವಿಷ್ಣುವಿಗೇ ಶೇಷಭೂತ, ಸ್ವತಂತ್ರನಲ್ಲ ; ನನಗೆ ಭಗವಂತನೇ ರಕ್ಷಕ, ನಾನಲ್ಲ, ನಾನು ಸರ್ವಶೇಷಿಯಾದ ನಾರಾಯಣನಿಗೇ ಸರ್ವವಿಧ ಕೈಂಕರ್ಯವನ್ನ ಮಾಡುತ್ತೇನೆ, ನನ್ನ ಸ್ವಾರ್ಥಕ್ಕಾಗಿ ಅಲ್ಲ-ಎಂದು ಯಾವಾಗಲೂ ಹೇಳುತ್ತಿರುವುದು ಶ್ರೀವೈಷ್ಣವನ ಲಕ್ಷಣ.

ಮುಖ್ಯವಾಗಿ ಸಕಲಕ್ಕೂ ಕಾರಣಭೂತ, ಸರ್ವಶೇಷಿ, ಸರ್ವರಕ್ಷಕ, ಸರ್ವರಿಗೂ ಮೋಕ್ಷದಾಯಕ, ಲಕ್ಷ್ಮೀಸಹಿತ, ಆದ ಶ್ರೀಮನ್ನಾರಾಯಣನಿಗೆ

ಅಧ್ಯಯನ-ಅನುಸಂಧಾನಗಳು ಶ್ರೀವೈಷ್ಣವರ ಧಾರ್ಮಿಕ ಜೀವನದ ಒಂದು ಅಂಗವಾಗಿದೆ.

ಭಾಗವತ, ಭಕ್ತ, ಭಗವಂತ ಈ ಮೂರೂ ಒಂದೇ, ಭಕ್ತಿ-ಪ್ರಪತ್ತಿಗಳೇ ಮುಕ್ತಿಗೆ ದಾರಿ, ಇದಕ್ಕೆ ಎಲ್ಲರೂ ಅಧಿಕಾರಿಗಳು -ಎಂಬ ತತ್ತ್ವವನ್ನು ತಮ್ಮ ಜೀವನ -ಅನುಷ್ಠಾನಗಳ ಮೂಲಕ ತೋರಿಸಿಕೊಟ್ಟು, ಮಾನವೀಯತಾ ದೃಷ್ಟಿಯನ್ನು ಹೊಂದಿದ್ದು ದುಃಖಿತಪ್ತನಾದ ಮಾನವ ಜನಾಂಗದ ಹೃದಯವನು ತಣಿಸಿದ, ಆಳ್ವಾರುಗಳ ವಿಷಯದಲ್ಲಿ ಜನರಿಗೆ ಅಸದೃಶವಾದ ಭಕ್ತಿ, ಪ್ರೇಮ, ಗೌರವಗಳಿವೆ. ಈ ಆಳ್ವಾರುಗಳ ಮೂರ್ತಿಯನ್ನು ದೇವಾಲಯಗಳಲ್ಲಿ ಸ್ಥಾಪಿಸಿ ಪೂಜಿಸಲಾಗುತ್ತಿದೆ, ಇವರ ಗೀತೆಗಳನ್ನು ಸಭೆ-ಉತ್ಸವಗಳಲ್ಲಿ ಹಾಡಲಾಗುತ್ತದೆ ಇವರ ಜೀವನದಲ್ಲಿನ ಪ್ರಭಾವಶಾಲಿಯಾದ ಘಟನೆಗಳನ್ನು ಅಭಿನಯಿಸಲಾಗುತ್ತದೆ.

ಆಳ್ವಾರುಗಳು ರಚಿಸಿದ ಪ್ರಬಂಧಗಳ ಹೆಸರು ಮತ್ತು ಸಂಖ್ಯೆ ಹೀಗಿದ್ದು ಎಲ್ಲವೂ ಸೇರಿ ನಾಲಾಯಿರ ಪ್ರಬಂಧವೆನಿಸಿವೆ. ಅವುಗಳು ಯಾವ ಸಾವಿರದಲ್ಲಿ ಸೇರಿವೆ ಎಂಬುದನ್ನು ಮುಂದುಗಡೆ ಗುರುತಿಸಲಾಗಿದೆ.

| ಆಳ್ವಾರುಗಳ ಹೆಸರು | ಕೃತಿಯ ಹೆಸರು | ಪಾಶುರಗಳ ಸಂಖ್ಯೆ | ಯಾವ ಸಾವಿರದಲ್ಲಿ ಸೇರಿವೆ. |
|---|---|---|---|
| ಪೊಯ್‌ಗೈಯಾಳ್ವಾರ್ | ಮುದಲ್ ತಿರುವಂದಾದಿ | 100 | III |
| ಪೂದತ್ತಾಳ್ವಾರ್ | ಇರಂಡಾಂ ತಿರುವಂದಾದಿ | 100 | III |
| ಪೆ ಯಾಳ್ವಾರ್ | ಮೂನ್ರಾಂ ತಿರುವಂದಾದಿ | 100 | III |
| ತಿರುಮಳಿಶೈಯಾಳ್ವಾರ್ | ತಿರುಚ್ಚಂಡವಿರುತ್ತಂ | 120 | I |
| | ನಾನ್ಮುಗನ್ ತಿರುವಂದಾದಿ | 96 | III |
| ಮಧುರಕವಿಯಾಳ್ವಾರ್ | ಕಣ್ಣಿನುಣ್ ಶಿರುತ್ತಾಂಬು | 11 | I |

| | | | |
|---|---|---|---|
| ನಮ್ಮಾಳ್ವಾರ್ | ತಿರುವಿರುತ್ತಂ | 100 | III |
| | ತಿರುವಾಶಿರಿಯಂ | 7 | III |
| | ಪೆರಿಯ ತಿರುವಂದಾದಿ | 87 | III |
| | ತಿರುವಾಯ್ಮೊಳಿ | 1102 | IV |
| ಕುಲಶೇಖರಾಳ್ವಾರ್ | ಪೆರುಮಾಳ್ ತಿರುಮೊಳಿ | 105 | I |
| ಪೆರಿಯಾಳ್ವಾರ್ | ತಿರುಪ್ಪಲ್ಲಾಂಡು | 12 | I |
| | ತಿರುಮೊಳಿ | 461 | I |
| ಆಂಡಾಳ್ ಆಳ್ವಾರ್ | ತಿರುಪ್ಪಾವೈ | 30 | I |
| | ನಾಚ್ಚಿಯಾರ್ ತಿರುಮೊಳಿ | 148 | I |
| ತೊಂಡರಡಿಪ್ಪೊಡಿಯಾಳ್ವಾರ್ | ತಿರುಮಾಲೈ | 45 | I |
| | ತಿರುಪ್ಪಳ್ಳಿಯೆಳುಚ್ಚಿ | 10 | I |
| ತಿರುಪ್ಪಾಣಾಳ್ವಾರ್ | ಅಮಲನಾದಿಪಿರಾನ್ | 10 | I |
| ತಿರುಮಂಗೈಯಾಳ್ವಾರ್ | ಪೆರಿಯ ತಿರುಮೊಳಿ | 1084 | II |
| | ತಿರುಕ್ಕುರುಂದಾಂಡಕಂ | 20 | II |
| | ತಿರುನೆಡುಂದಾಂಡಕಂ | 30 | II |
| | ತಿರುವೆಳುಕ್ಕೂತ್ತಿರುಕ್ಕೈ | 1 | III |
| | ಶಿರಿಯ ತಿರುಮಡಲ್ | 40 | III |
| | ಪೆರಿಯ ತಿರುಮಡಲ್ | 78 | III |
| ತಿರುವರಂಗತ್ತಮುದನಾರ್ (ರಾಮಾನುಜರ ಶಿಷ್ಯ) | ರಾಮಾನುಜ ನೂತ್ತಂದಾದಿ | 108 | |
| | ಒಟ್ಟು ಪಾಶುರಗಳು | 4000 | |

ಕೆಲವು ಆಚಾರ್ಯರು ಮೂರನೆಯದನ್ನು ನಾಲ್ಕನೆಯದೆಂದೂ, ನಾಲ್ಕನೆಯದನ್ನು ಮೂರನೆಯದೆಂದೂ ಹೇಳುತ್ತಾರೆ.

ಭೂತಂ ಸರಶ್ಚ ಮಹದಾಹ್ವಯ ಭಟ್ಟನಾಥ
ಶ್ರೀ ಭಕ್ತಿಸಾರ ಕುಲಶೇಖರ ಯೋಗಿವಾಹಾನ್ ।
ಭಕ್ತಾಂಘ್ರಿರೇಣು ಪರಕಾಲ ಯತೀಂದ್ರ ಮಿಶ್ರಾನ್
ಶ್ರೀಮತ್ಪರಾಂಕುಶ ಮುನಿಂ ಪ್ರಣತೋಸ್ಮಿ ನಿತ್ಯಂ ॥

–ಇದು ಆಳ್ವಾರುಗಳನ್ನು ಕುರಿತು ಶ್ರೀವೈಷ್ಣವರು ಮಾಡುವ ಪ್ರಾರ್ಥನೆ.

## ಅನುಬಂಧ ೩ – ರಹಸ್ಯತ್ರಯ

ಪಂಚ ಸಂಸ್ಕಾರಗಳಲ್ಲಿ ಮಂತ್ರವೂ ಒಂದು. ಶ್ರೀವೈಷ್ಣವ ಮತದಲ್ಲಿ ನಿಷ್ಠೆಯುಳ್ಳವರಿಗೆ ಉಪದೇಶಿಸುವ ಮೂರು ಸತ್ಯಾರ್ಥಪೂರಿತ ಮಂತ್ರಗಳಿಗೆ ರಹಸ್ಯತ್ರಯವೆಂದು ಹೆಸರು. ಶ್ರೀವೈಷ್ಣವ ಮತದ ಮುಖ್ಯ ತತ್ತ್ವಗಳನ್ನು ತಿಳಿಸುವ ಇದರ ಮೇಲೆ ಅನೇಕ ಆಚಾರ್ಯರು ಹತ್ತಾರು ಗ್ರಂಥಗಳನ್ನು ರಚಿಸಿದ್ದಾರೆ. ಆದರೆ ವೇದಾಂತ ದೇಶಿಕರ "ರಹಸ್ಯತ್ರಯಸಾರ"ವೆಂಬ ಗ್ರಂಥವು ಎಲ್ಲಕ್ಕಿಂತಲೂ ಪರಿಪೂರ್ಣ, ಸರ್ವೋತ್ಕೃಷ್ಟ ಆಗಿದೆ ಎಂಬುದು ಅನೇಕರ ಅಭಿಪ್ರಾಯ.

ಶ್ರಿಯಃಪತಿಯಾದ ನಾರಾಯಣನ ಪಾದಾರವಿಂದಗಳನ್ನು ಸೇರಬೇಕೆಂದು ಅಪೇಕ್ಷಿಸುವ ಮುಮುಕ್ಷುವಿಗೆ ಈ ರಹಸ್ಯತ್ರಯದ ಜ್ಞಾನವು ಅತ್ಯವಶ್ಯಕವಾದುದು ಏಕೆಂದರೆ ಇದು ತತ್ತ್ವ, ಹಿತ, ಪುರುಷಾರ್ಥಗಳ ಸ್ವರೂಪವನ್ನು ಸಂಶಯ–ವಿಪರ್ಯಾಯಗಳಿಗೆ ಅವಕಾಶವಿಲ್ಲದಂತೆ ಯಥಾವತ್ತಾಗಿ ತಿಳಿಸುತ್ತದೆ. ವೇದದಲ್ಲಿ ಒಂದು ಭಾಗವಾದ ಮೂಲಮಂತ್ರವು ಸಮಸ್ತ ವೇದಪ್ರತಿಪಾದ್ಯ ಸಾರಸಂಗ್ರಹರೂಪ ಆಗಿದೆ. ಈ ಮೂಲಮಂತ್ರವನ್ನು, ಸರ್ವೇಶ್ವರನು ಬದರಿಕಾಶ್ರಮದಲ್ಲಿ ನಾರಾಯಣನ ರೂಪದಿಂದ, ತನ್ನ ಅಂಶ ಸಂಭೂತನಾದ

ನರನಿಗೆ ಉಪದೇಶ ಮಾಡಿದನು. ಪರಮ ಪವಿತ್ರ. ಪರಮಗುಹ್ಯ, ಶ್ರೇಷ್ಠ ವ್ಯಾಪಕ ಆಗಿರುವ ಈ ಮೂಲಮಂತ್ರಕ್ಕೆ ಮಹರ್ಷಿಗಳು, ಆಳ್ವಾರುಗಳು, ಆಚಾರ್ಯರು ತುಂಬಾ ಪ್ರಾಮುಖ್ಯತೆಯನ್ನು ನೀಡಿದ್ದಾರೆ. ಈ ಮೂಲ ಮಂತ್ರದ ವ್ಯಾಖ್ಯಾನ ರೂಪವಾದ ದ್ವಯಮಂತ್ರವು ಪುರುಷಾರ್ಥವನ್ನೂ, ದ್ವಯಮಂತ್ರದ ವಿವರಣೆ ಎನಿಸಿದ ಚರಮ ಶ್ಲೋಕವು ಹಿತವನ್ನೂ ತಿಳಿಸುತ್ತವೆ. ಭೂದೇವಿಗೆ ವರಾಹನಾಗಿದ್ದಾಗ ದ್ವಯಮಂತ್ರವನ್ನೂ, ಅರ್ಜುನನಿಗೆ ಶ್ರೀಕೃಷ್ಣನಾಗಿದ್ದಾಗ ಹಾಗೂ ವಿಭೀಷಣನಿಗೆ ಶ್ರೀರಾಮನಾಗಿದ್ದಾಗ ಚರಮ ಶ್ಲೋಕವನ್ನೂ, ನಾರಾಯಣನೇ ಉಪದೇಶಿಸಿದ್ದಾನೆ.

ಈ ರಹಸ್ಯತ್ರಯ ಮಂತ್ರವು, ಸದಾಚಾರ್ಯಾಭಿಮಾನ ಪುರಸ್ಸರವಾದ ಉಪದೇಶ ಮೂಲಕವಾಗಿ ಪ್ರಾಪ್ತವಾದಾಗ ಮಾತ್ರ ಶ್ರೇಷ್ಠವೆನಿಸಿಕೊಂಡು ಸಫಲವಾಗುತ್ತದೆಂಬುದು ಹಿರಿಯರ ಅಭಿಪ್ರಾಯ.

## 1) ಮೂಲ ಮಂತ್ರ

"ಓಂ ನಮೋ ನಾರಾಯಣಾಯ" ಎಂಬೀ ಅಷ್ಟಾಕ್ಷರಗಳಿಂದ ಕೂಡಿರುವುದೇ ಪ್ರಸಿದ್ಧವಾದ ಮೂಲ ಮಂತ್ರ. ಇದು ಸಕಲ ಫಲಪ್ರದ ಶಕ್ತಿಯುಳ್ಳದ್ದು. ಇದರಲ್ಲಿನ ಓಂ ಎಂಬ ಪ್ರಣವವು ಅಕಾರ, ಉಕಾರ, ಮಕಾರಗಳಿಂದ ಕೂಡಿದೆ. ಪ್ರಣವವು ಸಕಲ ವೇದಗಳ ಸಾರ ಸಂಗ್ರಹವಾದುದು. ಸಕಲ ವೇದ ಶಾಸ್ತ್ರಗಳೂ ಅರ್ಥ ಪಂಚಕವನ್ನು ಪ್ರತಿಪಾದಿಸುವುದರಿಂದ, ಅದರ ಸಂಗ್ರಹವಾದ ಮೂಲ ಮಂತ್ರದಲ್ಲಿಯೂ ಅರ್ಥ ಪಂಚಕವೇ ಪ್ರತಿಪಾದಿಸಲ್ಪಟ್ಟಿದೆ. ವೇದಗಳು, ಸ್ವರಗಳು, ಸ್ಥಾವರ-ಜಂಗಮಾತ್ಮಕ ಪ್ರಪಂಚ ಎಲ್ಲವೂ ಓಂಕಾರದಿಂದಲೇ ಉತ್ಪನ್ನವಾದುವು.

ಜಗತ್ತಿನ ಉತ್ಪತ್ತಿ, ರಕ್ಷಣ, ನಾಶಗಳಿಗೆಲ್ಲ ಕಾರಣ ಭೂತನಾದ ವಿಷ್ಣುವು ಅಕಾರವಾಚ್ಯನು ; ನಿತ್ಯ, ಮುಕ್ತ, ಬದ್ಧರೆಂಬ ತ್ರಿವಿಧ ಚೇತನ ವರ್ಗವು ಮಕಾರ ವಾಚ್ಯವು ; ಮಕಾರ ಶಬ್ದನಾದ ಜೀವನೂ, ಜೀವಾತ್ಮನಿಗೆ ಶೇಷ ಭೂತವಾದ ಶುದ್ಧ ಸತ್ತ್ವ, ಮಿಶ್ರತತ್ತ್ವ, ಸತ್ತ್ವಶೂನ್ಯ ಎಂಬ ಭೇದದಿಂದ

ಮೂರು ಪ್ರಕಾರವಾದ ಅಚೇತನವೂ, ವಿಷ್ಣುವಿಗೇ ಶೇಷಭೂತವಾದುದು ; ಅಕಾರ, ಮಕಾರ ವಾಚ್ಯರಾದ ಪರಮಾತ್ಮ-ಜೀವಾತ್ಮರುಗಳ ಸಂಬಂಧವು ಅನನ್ಯಾರ್ಹವೆಂದು ಉಕಾರವು ಹೇಳುತ್ತದೆ ; ಮುಖ್ಯವಾಗಿ ಸರ್ವಲೋಕ ನಿಯಾಮಕನಾದ ವಿಷ್ಣುವೇ ಅಕಾರಾರ್ಥವು, ಲಕ್ಷ್ಮಿಯೇ ಉಕಾರಾರ್ಥವು, ಲಕ್ಷ್ಮೀನಾರಾಯಣರಿಗೆ ದಾಸನಾದ ಜೀವಾತ್ಮನೇ ಮಕಾರ ಶಬ್ದಾರ್ಥವು ; ಅಕಾರವು ಪಿತಾಪುತ್ರ, ರಕ್ಷ್ಯ ರಕ್ಷಕ, ಶೇಷಶೇಷಿ ಸಂಬಂಧ ದ್ಯೋತಕವು ; ಉಕಾರವು ಭರ್ತೃಭಾರ್ಯಾ ಸಂಬಂಧವನ್ನು ಸೂಚಿಸುತ್ತದೆ ; ಮಕಾರ ದಿಂದ ಜ್ಞಾತೃ ಜ್ಞೇಯ ಸಂಬಂಧವೂ, ನಮಸ್ ಶಬ್ದದಿಂದ ಸ್ವಸ್ವಾಮಿ ಸಂಬಂಧವೂ, ನಾರ ಶಬ್ದದಿಂದ ಶರೀರಿ ಶರೀರ ಸಂಬಂಧವೂ, ಅಯನ ಶಬ್ದದಿಂದ ಆಧಾರಾಧೇಯ ಸಂಬಂಧವೂ, ಆಯ ಶಬ್ದದಿಂದ ಭೋಕ್ತೃ ಭೋಗ್ಯ ಸಂಬಂಧವೂ ಸೂಚಿತವಾಗಿದೆ.

ಹೀಗೆ ಈ ತಿರುಮಂತ್ರದಲ್ಲಿ ಈಶ್ವರ-ಚೇತನರ ಮಧ್ಯೆ ಇರುವ ನವವಿಧ ಸಂಬಂಧಗಳೂ ವ್ಯಕ್ತವಾಗಿವೆ. ಆದುದರಿಂದಲೇ ಇದು ಮುಮುಕ್ಷುವಿಗೆ ನಿತ್ಯಾನುಸಂಧೇಯವಾದುದು.

ಈ ಮಂತ್ರದಲ್ಲಿನ ಓಂ, ನಮಃ, ನಾರಾಯಣಾಯ ಎಂಬ ಮೂರು ಶಬ್ದಗಳಲ್ಲಿ, ಕ್ರಮವಾಗಿ ಶೇಷತ್ವ, ಪಾರತಂತ್ರ್ಯ, ಕೈಂಕರ್ಯ, ಎಂಬ ಮೂರು ಪ್ರಧಾನ ಅರ್ಥಗಳು ಸೂಚಿಸಲ್ಪಟ್ಟಿವೆ. ಭಗವಂತನಿಗೆ ಅಧೀನನಾಗಿರುವುದು ಶೇಷತ್ವ ಮತ್ತು ಪಾರತಂತ್ರ್ಯ. ಭಗವದ್ಭಾಗವತರಿಗೆ ಸೇವೆ ಮಾಡುತ್ತ, ಗಂಧ, ಹೂ, ಕರ್ಪೂರ, ವೃಕ್ಷಗಳಂತೆ ನಿಸ್ವಾರ್ಥ ಜೀವನ ನಡೆಸುವುದು ಕೈಂಕರ್ಯ. ನಾನು ವಿಷ್ಣುವಿಗೇ ಶೇಷಭೂತ, ಸ್ವತಂತ್ರನಲ್ಲ ; ನನಗೆ ಭಗವಂತನೇ ರಕ್ಷಕ, ನಾನಲ್ಲ, ನಾನು ಸರ್ವಶೇಷಿಯಾದ ನಾರಾಯಣನಿಗೇ ಸರ್ವವಿಧ ಕೈಂಕರ್ಯವನ್ನ ಮಾಡುತ್ತೇನೆ, ನನ್ನ ಸ್ವಾರ್ಥಕ್ಕಾಗಿ ಅಲ್ಲ-ಎಂದು ಯಾವಾಗಲೂ ಹೇಳುತ್ತಿರುವುದು ಶ್ರೀವೈಷ್ಣವನ ಲಕ್ಷಣ.

ಮುಖ್ಯವಾಗಿ ಸಕಲಕ್ಕೂ ಕಾರಣಭೂತ, ಸರ್ವಶೇಷಿ, ಸರ್ವರಕ್ಷಕ, ಸರ್ವರಿಗೂ ಮೋಕ್ಷದಾಯಕ, ಲಕ್ಷ್ಮೀಸಹಿತ, ಆದ ಶ್ರೀಮನ್ನಾರಾಯಣನಿಗೆ

ಮಾತ್ರ ಸೇವಕನಾದ ನಾನು, ನನ್ನದೆಂಬ ಸ್ವಾರ್ಥದಿಂದ ವಿಮುಕ್ತನಾದವನು. ಸರ್ವ ಸ್ವಾಮಿಯಾದ ಶ್ರೀಮನ್ನಾರಾಯಣನಿಗೆ, ಅನವರತವೂ ಸಕಲ ಸೇವೆಗಳನ್ನು ಸಲ್ಲಿಸುವಂತಹ ಸೌಭಾಗ್ಯ ಎನಗೆ ಒದಗಲಿ–ಎಂಬುದೇ ಈ ಮೂಲ ಮಂತ್ರದ ತಿರುಳು.

## 2) ದ್ವಯ ಮಂತ್ರ

"ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ । ಶ್ರೀಮತೇ ನಾರಾಯಣಾಯನಮಃ ॥" ಎಂಬೀ ಆರು ಪದ ಹಾಗೂ ಎರಡು ಖಂಡಗಳಿಂದ ಇದು ದ್ವಯ ಮಂತ್ರವೆನಿಸುತ್ತದೆ. ಜಗನ್ಮಾತೆಯಾದ ಶ್ರೀಮಹಾಲಕ್ಷ್ಮಿಯ ಕಟಾಕ್ಷ ಅಥವಾ ಮಧ್ಯಸ್ಥಿಕೆಯಿಂದ ಮಾತ್ರ ಗುರಿಯನ್ನು ಮುಟ್ಟುವುದು ಸಾಧ್ಯ ಎಂಬುದನ್ನು ಈ ಮಂತ್ರವು ತಿಳಿಸುತ್ತದೆ ತನ್ನದೆಂಬುದು ಏನೂ ಇಲ್ಲ ಎಂಬ ನಿರಹಂಕಾರ ಭಾವದಿಂದ ಕೂಡಿದ್ದು, ದೇವರನ್ನು ಬಿಟ್ಟರೆ ಬೇರೆ ಗತಿಯಿಲ್ಲ ಎಂಬುದಾಗಿ ಸ್ವಾಮಿಯಲ್ಲಿ ಅತ್ಯಂತ ವಿನಯ ಹಾಗೂ ದೈನ್ಯತೆಗಳಿಂದ ಇರುವುದು, ಈ ದ್ವಯ ಮಂತ್ರದ ಉಪದೇಶ ಪಡೆದವನ ಲಕ್ಷಣವಾಗಿರುತ್ತದೆ.

ಶ್ರೀ ಮಹಾಲಕ್ಷ್ಮಿಯನ್ನು ಪುರುಷಕಾರತ್ವೇನ ಆಶ್ರಯಿಸಿ, ಅವಳಿಂದ ನಿತ್ಯ ಸಂಶ್ಲೇಷವುಳ್ಳ, ಸಕಲ ಕಲ್ಯಾಣ ಗುಣಪೂರ್ಣನಾದ, ಭಗವಂತನ ಪಾದಗಳನ್ನು ಉಪಾಯವಾಗಿ ಹೊಂದುವೆನು. ಪ್ರಾಪ್ಯಭೂತೆಯಾದ ಶ್ರೀಮಹಾಲಕ್ಷ್ಮಿಯಿಂದ ನಿತ್ಯ ಸಂಬಂಧವುಳ್ಳ, ಸರ್ವ ಶೇಷಿಯಾದ ಶ್ರೀಮನ್ನಾರಾಯಣನಿಗೆ, ಸರ್ವ ವಿಧ ಕೈಂಕರ್ಯವನ್ನೂ ಮಾಡುತ್ತೇನೆ. ನನಗಾಗಿ ಏನನ್ನೂ ಮಾಡುವುದಿಲ್ಲ ಎಂಬುದನ್ನೂ ಈ ಮಂತ್ರವು ತಿಳಿಸುತ್ತದೆ.

ಪ್ರಗತಿ, ಐಶ್ವರ್ಯ, ಆತ್ಮಪ್ರಶಂಸೆ ಮೊದಲಾದ ಲೌಕಿಕ ಸ್ವಾರ್ಥ ಸುಖಗಳ ಸಾಂಸಾರಿಕ ಸಂಬಂಧಗಳನ್ನೆಲ್ಲ ಬದಿಗೊತ್ತಿ, ಸ್ವಾಮಿಯೇ ಸಾಧನ, ಅನನ್ಯ ರಕ್ಷಕ, ಎಂದು ನಂಬಿ, ಎಂದಿಗೂ ಗುರಿ ತಪ್ಪುವುದಿಲ್ಲ ಎಂಬ ದೃಢ

ನಂಬಿಕೆಯಿಂದ ಅವಿಚ್ಛಿನ್ನವಾಗಿ ಅವನೆಡೆಗೆ ಸಾಗುತ್ತ, ಸದಾ ಸೇವಾ ತತ್ಪರನಾಗಿ, ಶ್ರೀಮನ್ನಾರಾಯಣನಿಗೆ ಕೈಂಕರ್ಯವೆಸಗುತ್ತ, ಮಂತ್ರವನ್ನು ಧ್ಯಾನಿಸುತ್ತ, ಭಗವಂತನ ಜ್ಞಾನವನ್ನು ಪಡೆದಿರುವ ಪರಮ ಭಾಗವತರ ಸತ್ಸಂಗದಲ್ಲಿದ್ದು, ಸಂತುಷ್ಟಿ-ವೈರಾಗ್ಯಗಳಿಂದ ಜೀವಿಸುವುದು, ಶ್ರೀವೈಷ್ಣವ ದೀಕ್ಷೆಯನ್ನು ಹೊಂದಿದವನ ಅನಿವಾರ್ಯ ಆವಶ್ಯಕತೆಗಳು.

## 3) ಚರಮಶ್ಲೋಕ ಮಂತ್ರ

ಮಹಾಭಾರತದಲ್ಲಿ ಶ್ರೇಷ್ಠವೆನಿಸಿದ ಭಗವದ್ಗೀತೆಯಲ್ಲಿರುವ ಚರಮ ಶ್ಲೋಕವು ಸರ್ವಫಲ ಸಾಧಕವೆಂಬುದು ಆಚಾರ್ಯರ ಅಭಿಪ್ರಾಯ.

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ ।
ಅಹಂತ್ವಾಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚ ॥

ಭಗವದ್ಗೀತೆಯ ಅಂತ್ಯ ಸಂದೇಶವೆನಿಸಿದ ಈ ಎರಡು ಸಾಲುಗಳು ಚರಮ ಶ್ಲೋಕ ಅಥವಾ ಶರಣಾಗತಿ ಮಂತ್ರ ಎನಿಸಿಕೊಳ್ಳುತ್ತದೆ.

ಅನುಷ್ಠಿಸಲ್ಪಡತಕ್ಕ ನಿತ್ಯನೈಮಿತ್ತಿಕಾದಿ ಸಕಲ ಕರ್ಮಗಳಲ್ಲಿಯೂ, ಆಶ್ರಯಿಸಲು ಸೌಕರ್ಯವನ್ನುಂಟು ಮಾಡುವ ವಾತ್ಸಲ್ಯ, ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯ, ಆದಿ ಗುಣಗಳಿಂದ ಕೂಡಿದ ನನ್ನನ್ನೇ ಶರಣು ಹೊಂದುವವನಾಗು. ಜ್ಞಾನ ಶಕ್ತ್ಯಾದಿ ಸಕಲ ಗುಣಪೂರ್ಣನಾದ ನಾನು, ನನ್ನನ್ನೇ ಉಪಾಯತಯಾ ಆಶ್ರಿಸಿದ ನಿನ್ನನ್ನು, ಪ್ರಾಪ್ತಿ ಪ್ರತಿಬಂಧಕಗಳಾದ ಸಕಲ ಪಾಪಗಳ ದೆಸೆಯಿಂದಲೂ ಬಿಡಲ್ಪಟ್ಟವನನ್ನಾಗಿ ಮಾಡುವೆನು, ಶೋಕಿಸಬೇಡ- ಎಂಬುದಾಗಿ ಶ್ರೀಕೃಷ್ಣ ಪರಮಾತ್ಮನು ಅರ್ಜುನನ ಮೂಲಕ ಮಾನವರಿಗೆ ಕೊಟ್ಟ ಭರವಸೆ ಈ ಮಂತ್ರದ ಸಾರ.

ಕರ್ಮ, ಜ್ಞಾನ, ಭಕ್ತಿ ಮಾರ್ಗಗಳನ್ನು ಅನುಸರಿಸಲು, ಸಾಧಕನಿಗೆ ಅರ್ಹತೆಯನ್ನು ನೀಡುವ ಶ್ರುತಿ ಸ್ಮೃತಿ ಪ್ರಣೀತವಾದ ಸಾಧನಗಳನ್ನು ತ್ಯಜಿಸಿ,

ಜ್ಞಾನ ಶಕ್ತ್ಯಾದಿ ಸಕಲ ಗುಣಪೂರ್ಣನಾದ ಸ್ವಾಮಿಯೊಬ್ಬನೇ ಏಕೈಕ ಆಶ್ರಯುವೆಂದು ತಿಳಿದು, ಅವನು ಸರ್ವರನ್ನೂ ರಕ್ಷಿಸುತ್ತಾನೆ ಎಂಬ ಮಹಾ ವಿಶ್ವಾಸದಿಂದ, ಜೀವನು ಭರನ್ಯಾಸ ಮಾಡಿದರೆ ಅಥವಾ ಸಂಕೊಚಿತವಲ್ಲದ ಸಂಪೂರ್ಣ ಮನೋಭಾವದಿಂದ ಸ್ವಾಮಿಗೆ ತನ್ನನ್ನು ತಾನು ಅರ್ಪಿತ ಮಾಡಿ ಕೊಂಡರೆ, ಇಚ್ಛಿತ ಫಲವು ಸಿಗುವುದರಲ್ಲಿ ಸಂದೇಹವಿಲ್ಲ ಎಂಬುದೂ ಈ ಮಂತ್ರದ ತಿರುಳು.

## ಅನುಬಂಧ =೪—ಶರಣಾಗತಿ

ಶರಣಾಗತಿಗೆ ಆತ್ಮಸಮರ್ಪಣ, ಭರನ್ಯಾಸ, ನ್ಯಾಸ, ಪ್ರಪದನ, ನಿಕ್ಷೇಪ, ಪ್ರಪತ್ತಿ ಎಂಬ ವಿವಿಧ ಹೆಸರುಗಳಿವೆ. ಚೇತನನಿಗೆ ಭಕ್ತಿಯು ಬಾಹ್ಯ ಕವಚವಾದರೆ, ಪ್ರಪತ್ತಿಯು ಆಂತರಿಕ ಕವಚವಾಗಿದೆ. ಮಾನವನಿಗೆ ತನ್ನ ಶಕ್ತಿ ಸಾಮರ್ಥ್ಯಗಳಿಂದ ಧ್ಯೇಯ ಸಾಧನೆ ಆಗದಿದ್ದಾಗ, ತನ್ನಲ್ಲಿರುವ ಅಹಂಕಾರ–ಮಮಕಾರಗಳನ್ನು ತ್ಯಜಿಸಿ, ಜಗತ್ತಿನ ಮೂಲ ಕಾರಣನಾದ ಭಗವಂತನ ಧ್ಯಾನ–ಜಪ–ಪೂಜೆಗಳಲ್ಲಿ ನಿರತರಾಗಿ, ಆತನ ಶಕ್ತಿಗೆ ಶರಣು ಹೋಗುವುದೇ ಕಾರ್ಯಸಿದ್ಧಿಗೆ ಪರಮೋಪಾಯವಾದುದು, ಆದಕಾರಣ ಮುಕ್ತಿಗೆ, ಶ್ರುತಿ, ಸ್ಮೃತಿ ಮತ್ತು ದಿವ್ಯ ಪ್ರಬಂಧಗಳಲ್ಲಿ ಎತ್ತಿ ಹಿಡಿದಿರುವ ಪ್ರಪತ್ತಿಯೂ ಒಂದು ಮುಖ್ಯ ಸಾಧನ.

ಶ್ರೀ ವೈಷ್ಣವ ಮತಕ್ಕೆ ಪ್ರಪತ್ತಿಯೇ ಅಡಿಗಲ್ಲು. ಜೀವನು ತನ್ನ ಅಲ್ಪತ್ವ ಮತ್ತು ಅಶಕ್ತಿಗಳನ್ನು ಮನಗಂಡು, ತನ್ನ ರಕ್ಷಣೆಯ ಹೊಣೆಯನ್ನು ಸರ್ವ ರಕ್ಷಕನಾದ ಭಗವಂತನ ಮೇಲೆ ಹಾಕಿ ನಿಶ್ಚಿಂತನಾಗಿರುವುದೇ ಪ್ರಪತ್ತಿಯ ಅರ್ಥ. ಆಚಾರ್ಯ ರಾಮಾನುಜರ ಶ್ರೀ ವೈಕುಂಠ ಗದ್ಯದಲ್ಲಿ ಪ್ರಪತ್ತಿಯ

ವಿಷಯವು ಸುಂದರವಾಗಿ ಬಂದಿದೆ, ಆದರೆ ಇದರ ನಿಷ್ಕರ್ಷೆಯನ್ನು ನಿರ್ಧಾರ ವಾಗಿ ಮಾಡಿ ಸಂದೇಹಕ್ಕೆ ಅವಕಾಶವಿಲ್ಲದಂತೆ ಉಪಕರಿಸಿರುವವರು ವೇದಾಂತ ದೇಶಿಕರು. ಇದರಲ್ಲಿ ಶರಣ್ಯ, ಶರಣಾಗತ ಮತ್ತು ಶರಣಾಗತಿ ಈ ಮೂರೂ ತಿಳಿಯಬೇಕಾದ ಮುಖ್ಯ ಅಂಶಗಳು.

ಭಗವಂತನಿಗೆ ತನ್ನನ್ನು ಪೂರ್ಣವಾಗಿ ಒಪ್ಪಿಸಿ ಬಿಡುವ ಈ ಪ್ರಪತ್ತಿ ಅಥವಾ ಶರಣಾಗತಿಗೆ ವರ್ಣಾಶ್ರಮ ಅಧಿಕಾರಗಳ ಆವಶ್ಯಕತೆ ಇರುವುದಿಲ್ಲ ; ಪಂಡಿತ ಪಾಮರ, ಬಾಲವೃದ್ಧ, ಉಚ್ಚ ನೀಚ, ಬಡವ ಬಲ್ಲಿದ, ಸ್ತ್ರೀ ಪುರುಷ, ಮೃಗಪಕ್ಷಿ ಎಲ್ಲರಿಗೂ ಸರಿಸಮನಾದ ಮಾರ್ಗವಿದು ; ಇದಕ್ಕೆ ಕಾಲದೇಶ ಅವಸ್ಥಾ ಭೇದಗಳು ಇರುವುದಿಲ್ಲ–ಎಂಬುದು ಗಜೇಂದ್ರ, ಕಾಕಾಸುರ, ಸುಗ್ರೀವ, ವಿಭೀಷಣ, ಲಕ್ಷ್ಮಣ, ದ್ರೌಪದಿ, ಕಾಳೀಯ ಇವರು ಗಳಿಂದ ತಿಳಿದು ಬರುತ್ತದೆ.

ಶರಣ್ಯನು ಶಕ್ತಿವಂತನೂ, ಸುಲಭನೂ ಆಗಿರಬೇಕು. ಭಗವಂತನ ಸಂಕಲ್ಪಕ್ಕೆ ವಿರುದ್ಧವಾಗಿರಬಾರದು. ಜೀವನಲ್ಲಿ ಅಕಿಂಚನತ್ವ, ಅನನ್ಯ ಗತಿತ್ವ ಇರಬೇಕು. ಇದು ಇಲ್ಲದುದರಿಂದಲೇ ದಶರಥನು ಪರಶುರಾಮನಲ್ಲಿ, ಶ್ರೀರಾಮನು ಸಮುದ್ರರಾಜನಲ್ಲಿ, ಭರತನು ಶ್ರೀರಾಮನಲ್ಲಿ, ಮಾಡಿದ ಶರಣಾಗತಿ ಫಲಿಸಲಿಲ್ಲ.

ಪ್ರಪತ್ತಿಯ ಸ್ವರೂಪ ಹಾಗೂ ಅದನ್ನು ಅನುಷ್ಠಾನ ಮಾಡುವ ವಿಧಾನ ವನ್ನು ಚೆನ್ನಾಗಿ ಅರಿತು ತಾನೇ ಶರಣು ಹೋಗುವುದು ಸ್ವನಿಷ್ಠೆ ; ಭಗವಂತ ನಲ್ಲಿ ಭಕ್ತಿ ವಿಶ್ವಾಸಗಳನ್ನು ಹೊಂದಿದ್ದು, ಆಚಾರ್ಯರೊಬ್ಬರ ಉಪದೇಶ ವಾಕ್ಯಗಳ ಮೂಲಕ ಶರಣು ಹೋಗುವುದು ಉಕ್ತಿ ನಿಷ್ಠೆ ; ತನಗಾಗಿ ಆಚಾರ್ಯನೇ ಶರಣಾಗತಿಯನ್ನು ಮಾಡುವುದು ಆಚಾರ್ಯ ನಿಷ್ಠೆ ; ಅಶಕ್ತ ನಾದವನೊಬ್ಬನಿಗಾಗಿ ಭಾಗವತರು ಸೇರಿ ಪ್ರಾರ್ಥಿಸುವುದು ಭಾಗವತನಿಷ್ಠೆ. ಈ ನಾಲ್ಕು ಪದ್ಧತಿಗಳಲ್ಲಿ ಯಾವುದನ್ನು ಬೇಕಾದರೂ ಅನುಸರಿಸಬಹುದು.

ಸ್ವರೂಪ,ಆತ್ಮ ರಕ್ಷಣೆಯ ಹೊಣೆ, ರಕ್ಷಣೆಯಿಂದ ಬರುವ ಫಲ, ಎಲ್ಲವನ್ನೂ ಪರಮಾತ್ಮನಿಗೇ ಅರ್ಪಿಸುವುದು ಪ್ರಪತ್ತಿಯ ಮೂರು ಅಂಶಗಳು.

ಪಾಪದ ನಾಶಕ್ಕೆ, ಸಂಸಾರ ಬಂಧನದಿಂದ ಬಿಡುಗಡೆಗೆ ಹಾಗೂ ಮೋಕ್ಷ ಸಾಧನೆಗೆ ಅವಶ್ಯವಾದ ವೇದೋಪನಿಷತ್ತುಗಳನ್ನು ಓದಲಾರದ ಅವಿದ್ವಾಂಸರು ಹಾಗೂ ಓದಕೂಡದು ಎನ್ನುವ ಕೀಳು ಕುಲದವರೆನಿಸಿಕೊಂಡವರು, ಶಾಸ್ತ್ರೋಕ್ತವಾದ ಕರ್ಮ ಕರ್ತವ್ಯಗಳನ್ನು ಮಾಡಲಾರದ ದುರ್ಬಲರು, ಬಡವರು, ಸ್ತ್ರೀಯರು, ಭಗವಂತನ ಪ್ರಾಪ್ತಿಗೆ ಆಗುವ ವಿಳಂಬವನ್ನು ತಾಳ್ಮೆಯಿಂದ ಸಹಿಸದ ಆತುರಗಾರರು–ಇವರೆಲ್ಲರೂ ಪ್ರಪತ್ತಿಗೆ ಅಧಿಕಾರ ಪಡೆದವರು

ಉಪದೇಶಿಸಿದ ಅರ್ಥದಂತೆ ಅನುಷ್ಠಾನ ಮಾಡಲಾರದ ಭಾಗ್ಯಹೀನರು, ಉಪದೇಶ ಮಾಡುವ ಆಚಾರ್ಯನ ಬಗ್ಗೆ ನಿಷ್ಠೆ ಇಲ್ಲದವರು, ಗುರು ಶುಶ್ರೂಷೆಯನ್ನು ಮಾಡದವರು, ಭಗವಂತನಲ್ಲಿ ಪ್ರೀತಿ ವಿಶ್ವಾಸಗಳು ಇಲ್ಲದವರು, ತಾಯಿ ಗುರು ಆಗಿರುವ ಶ್ರೀ ಮಹಾಲಕ್ಷ್ಮಿಯಲ್ಲಿ ಮೊರೆ ಇಡದವರು ಇವರೆಲ್ಲರೂ ಪ್ರಪತ್ತಿಗೆ ಅನರ್ಹರು.

ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ್ಯ ವರ್ಜನಂ
ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವ ವರಣಂತಥಾ
ಆತ್ಮನಿಕ್ಷೇಪಕಾರ್ಪಣ್ಯೇ ಷಡ್ವಿಧಾಶರಣಾಗತಿಃ ॥

ಎಂಬಂತೆ ಭಗವಂತನಿಗೆ ತನ್ನನ್ನು ಅರ್ಪಿಸಿಕೊಳ್ಳಲು ಯೋಗ್ಯವಾದ ಒಳ್ಳೆಯ ಗುಣಗಳನ್ನು ಸಂಪಾದಿಸಿ, ಭಗವದಭಿಪ್ರಾಯಕ್ಕೆ ಅನುಕೂಲನಾಗಿರುವುದು; ಅದಕ್ಕೆ ಪ್ರತಿಕೂಲವಾದ ದುರ್ಗುಣಗಳನ್ನು ತ್ಯಜಿಸಿ. ಭಗವದಿಚ್ಛೆಗೆ ವಿರೋಧವಾಗಿ ಹೋಗದಿರುವುದು ; ಶರಣಾಗತರನ್ನು ರಕ್ಷಿಸಿಯೇ ತೀರುತ್ತಾನೆ ಎಂಬ ಪೂರ್ಣ ವಿಶ್ವಾಸವನ್ನು ಹೊಂದಿ, ತಾನು ಭಗವಂತನ ರಕ್ಷಣೆಯನ್ನು

ಪಡೆದಿದ್ದೇನೆ ಎಂದು ನಂಬಿರುವುದು; ಸರ್ವಲೋಕಶರಣ್ಯನಾದ ಭಗವಂತನೊಬ್ಬನೇ ಗತಿ ಎಂಬ ಮನೋನಿಶ್ಚಯವನ್ನು ಹೊಂದಿ. ತನ್ನ ಒಳಭಾವವನ್ನು ಗೋಪಸ್ತ್ರೀಯರಂತೆ ಪರಮಾತ್ಮನ ಮುಂದೆ ವರ್ಣಿಸುವುದು; ತನ್ನ ಅಲ್ಪತೆ–ಅಶಕ್ತಿಗಳನ್ನು ಅರಿತು ಪ್ರಕಟಿಸಿ, ಅಹಂಕಾರವನ್ನು ತೊರೆದು, ತಾನು ಮಾಡಿದ ಅಪರಾಧಗಳೆಲ್ಲವನ್ನೂ ನಿಷ್ಕಾಪಟ್ಯದಿಂದ ಭಗವಂತನಲ್ಲಿ ನಿವೇದಿಸಿಕೊಳ್ಳುವುದು; ಭಗವಂತನಲ್ಲಿ ಜೀವಾತ್ಮವನ್ನು ಸಂಪೂರ್ಣವಾಗಿ ಒಪ್ಪಿಸಿ ನಿಶ್ಚಿಂತನಾಗಿರುವುದು—ಇವು ಶರಣಾಗತಿಯ ಮುಖ್ಯ ಅಂಗಗಳು.

ಪ್ರಪತ್ತಿಯನ್ನು ಮಾಡಿದ ಪ್ರಪನ್ನನು, ಅಲ್ಲಿಂದಾಚೆಗೆ ತಾನು ಮಾಡುವ ಕೆಲಸಗಳಲ್ಲಿ ಸ್ವಪ್ರಯತ್ನ, ಸ್ವಾರ್ಥಗಳನ್ನು ಬಿಟ್ಟು, ಎಲ್ಲವೂ ಪರಮಾತ್ಮನದು ಎಂದು ತಿಳಿಯಬೇಕು. ಅಜ್ಞಾನ, ಅಶ್ರದ್ಧೆ, ಸಂದೇಹಗಳಿಗೆ ಆಸ್ಪದಕೊಡದೆ ನಿಶ್ಚಿಂತೆಯಾಗಿ, ನಿರ್ಮಲ ಮನಸ್ಸಿನಿಂದ, ಸ್ವಾಮಿಯಾದ ಭಗವಂತನನ್ನು ಸದಾ ಧ್ಯಾನಿಸುತ್ತ, ಕಣ್ಣಿನಿಂದ ನೋಡಿದುದೆಲ್ಲವೂ ಭಗವತ್ಪ್ರಕಾಶವೆಂದು ಭಾವಿಸುತ್ತ, ಕೈಗಳಿಂದ ಮಾಡಬೇಕಾದುದೆಲ್ಲವನ್ನೂ, ಭಗವಂತನ ಸೇವೆ–ಕೈಂಕರ್ಯವೆಂದೇ ತಿಳಿದು ನಿಷ್ಕಾಮ ಭಾವನೆಯಿಂದ ಮಾಡುತ್ತ, ಭಗವದನುಗ್ರಹದಿಂದ ಪಡೆದ ಸುಖ ಶಾಂತಿ ಸಮಾಧಾನಗಳನ್ನು ಅನುಭವಿಸುತ್ತ ಮುಕ್ತರಿಗೆ ಸಮನೆನಿಸಿ, ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳಬೇಕು.

## ಅನುಬಂಧ ೫— ಆಧಾರ ಗ್ರಂಥಗಳು


| | |
|---|---|
| ರಾಮಾನುಜ ದರ್ಶನ | ಡಾ॥ ಎನ್. ಎಸ್. ಅನಂತರಂಗಾಚಾರ್ |
| ಶ್ರೀ ನಮ್ಮಾಳ್ವಾರ್ ದರ್ಶನ | ” |
| ದಿವ್ಯ ಪ್ರಬಂಧ ದರ್ಶನ | ” |
| ದಿವ್ಯಸೂರಿ ಚರಿತೆ | ಡಿ. ಕೃಷ್ಣಯ್ಯಂಗಾರ್ |

| | |
|---|---|
| ಶರಣಾಗತಿ ತತ್ತ್ವ | |
| ಶ್ರೀವೇದಾಂತ ದೇಶಿಕರು | ,, |
| ಶ್ರೀಪರಕಾಲ ಮಠ ವೈಭವ | ,, |
| ಶ್ರೀಮದಾಚಾರ್ಯಪರಂಪರಾ ಪ್ರಭಾವ | ಕ. ಗೋಪಾಲಾಚಾರ್ಯ |
| ಆಚಾರ್ಯ ದರ್ಶನ | ಪಾವಗಡ ಪ್ರಕಾಶರಾವ್ |
| ಆಚಾರ್ಯ ರಾಮಾನುಜರು | ಎಂ. ಯಾಮುನಾಚಾರ್ಯ |
| ಆಳ್ವಾರುಗಳು | ,, |
| ಶ್ರೀವೈಷ್ಣವ ಸುಧಾನಿಧಿ | ಮುಡುಂಬೈ ರಾಮಾನುಜಯ್ಯಂಗಾರ್ |
| ಅಹೋಬಿಲಮಠ ವೈಭವ | ಎಸ್. ರಂಗಾಚಾರ್ |
| ನಮ್ಮ ಆಚಾರ್ಯರು | ವಿ. ಎಸ್. ರಾಮಾನುಜಾಚಾರ್ಯ |
| ಶ್ರೀರಾಮಾನುಜ ಸಿದ್ಧಾಂತ ದರ್ಪಣ | ಹೆಚ್. ಜಿ. ರಾಮಯ್ಯಂಗಾರ್ |
| ಗುರುಪರಂಪರಾಸಾರ | ಸಿ. ಎಂ. ವಿಜಯರಾಘವಾಚಾರ್ಯ |
| ಶ್ರೀರಾಮಮಿಶ್ರಾದ್ಯಾಚಾರ್ಯಚರಿತಂ | ಎಂ. ಆರ್. ವರದಾಚಾರ್ಯ |
| ತಮಿಳು ವೈಷ್ಣವ ಪ್ರಬಂಧಗಳು | ಡಾ॥ ಮಾಸ್ತಿ ವೆಂಕಟೇಶಯ್ಯಂಗಾರ್ |
| ಶ್ರೀಮದ್ವರವರಮುನಿಗಳ ವೈಭವ | ಅ. ನ. ಶ್ರೀನಿವಾಸಯ್ಯಂಗಾರ್ |
| ಶ್ರೀಮತ್ತಿರುಮಲೈ ನಲ್ಲಾನ್‌ಚಕ್ರವರ್ತಿ ವೈಭವ | ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ |
| ಶ್ರೀರಾಮಾನುಜಾಚಾರ್ಯರು | ಟಿ. ಶಾಂತಿ |
| ಮಣವಾಳ ಮಾಮುನಿಗಳ ವೈಭವ | ಶ್ರೀದೇವಿ |
| ಶ್ರೀಸೋಮಾಸಿಯಾಂಡಾನ್ ವೈಭವಂ | ನುಗ್ಗೆಹಳ್ಳಿ ಶ್ರೀನಿವಾಸಾಚಾರ್ಯ |
| ರಾಮಾಯಣ ಶರಣಾಗತಿ ಸಿದ್ಧಾಂತ | ತಿ. ಆ. ಸಂಪತ್ಕುಮಾರಾಚಾರ್ |
| ಶ್ರೀವೇದಾಂತ ದೇಶಿಕ | ವಿಶಿಷ್ಟಾದ್ವೈತಸಭಾ, ಬೆಂಗಳೂರು |
| ಶ್ರೀ ಮಣವಾಳ ಮಾಮುನಿ | ,, |
| ಶ್ರೀದೇಶಿಕ ಸಂಭಾವನಾ | ಶ್ರೀವೆಂಕಟೇಶ ಸಭಾ, ಮೈಸೂರು |
| ಶ್ರೀವೈಷ್ಣವ ದರ್ಶನ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು |
| Vaisnavism Saivism | Sir R. G. Bhandarkar |
| A History of Indian Philosophy | Dr. S. N. Dasgupta |

| | |
|---|---|
| Visnuism and Sivaism | J. Gonda |
| The Holy Lives of Alvars | A Govindacharya |
| Tiruppavai | C. Jagannathachariar |
| Bhakthi Renaissance | A. K. Majumdar |
| Contribution of Yamuna | Dr. M. Narasimhachari |
| Life of Ramanuja | Swami Ramakrishnananda |
| Rahasya rayasara | M R. Rajagopala Ayyangar |
| Indian Philosophy | Sir S. Radhakrishnan |
| History of Srivaishnavism | Dr B. V. Ramanujam |
| Srivaishnava Brahmans | K. Rangachari |
| History of Vaishnava Sect | H. C. Raychaudhuri |
| Vaishnavism | Sita Bhateja |
| Vedanta Desika | Dr. Satyavratasingh |
| Sankaradeva and Ramanuja | Dr. H.V. Sreenivasamurthy |
| Manavala Mamuni | Satyamurthy Ayyangar |
| Vedanta Desika | ,, |
| Vaisnavism | Dr. Suvira Jaiswal |
| Mahatmas of India | Trivedi Krishnaji |
| Alvars of South India | Dr. K. C. Varadachari |
| Agamas and Vaisnavism | Dr. V. Varadachari |
| Yatiraja Vaibhava | ,, |
| Srivaisnava Manipravala | Dr. K. K. A. Venkatachari |
| Ramanuja's Teachings | M. Yamunacharya |
| Studies in Ramanuja | Ramanuja Vedanta Centre |
| Vaisnavite Reformers of India | Nateshan and Co. Madras |
| Three Great Acharyas | ,, |


